# ದೇವರ ಆಗಮನಕ್ಕೆ

## ಇದು ಸಮಯವಲ್ಲವೇ?




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ದೇವರ ಆಗಮನಕ್ಕೆ ಇದು ಸಮಯವಲ್ಲವೇ?


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38    ಪ್ರಥಮ ಮುದ್ರಣ : ಡಿಸೆಂಬರ್–2016

ಪ್ರತಿಗಳು : 1000    **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣೆ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
 ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
 ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
 ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
 ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
 ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
 ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
 ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
    ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು.  ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ದೇವರ ಆಗಮನಕ್ಕೆ ಇದು ಸಮಯವಲ್ಲವಾ?

ನಾವು ಮೂರು ಮತಗಳಿಗಿಗೆ ಸಂಬಂಧಿಸಿದ ಜ್ಞಾನವನ್ನು ಒಂದೇ ತ್ರೈತ ಸಿದ್ಧಾಂತದ ಆಧಾರದಿಂದ ಹೇಳುತ್ತಿದ್ದೇವೆ. ತ್ರೈತ ಸಿದ್ಧಾಂತವನ್ನು ಅನುಸರಿಸಿ ಸೃಷ್ಟಿ ಆದಿಯಿಂದ ಜ್ಞಾನ ಹೇಳಲ್ಪಡುತ್ತಿದೆ. ಆದರೂ ಈ ದಿನದವರೆಗು **'ತ್ರೈತ ಸಿದ್ಧಾಂತ'** ಎನ್ನುವುದೇ ಮನುಷ್ಯರಿಗೆ ಅರ್ಥವಾಗಲಿಲ್ಲ. ಆದ್ದರಿಂದ 'ದೇವರ ಆಗಮನ' ಎನ್ನುತ್ತಲೇ ಕೆಲವರು ಮುಖ ತಿರುವಿಕೊಳ್ಳುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ದೇವರು ಬರುವುದಿಲ್ಲವೆಂದು ಎಂದರೆ ಹುಟ್ಟುವುದಿಲ್ಲವೆಂದು ಅಂದು ಕೊಳ್ಳುತ್ತಿದ್ದಾರೆ. ದೇವರು ಮನುಷ್ಯರ ಮಧ್ಯದೊಳಗೆ ಬರುವುದಿಲ್ಲವೆಂಬ ಭಾವನೆ ಅವರಿಗಿರುವುದರಿಂದ ಈ ಗ್ರಂಥದ ಹೆಸರು ಕೂಡಾ ಅವರಿಗೆ ಇಷ್ಟವಾಗುವುದಿಲ್ಲ. ಮುಖ್ಯವಾಗಿ 'ದೇವರು ಹುಟ್ಟುವುದಿಲ್ಲ' ಎನ್ನುವ ಭಾವನೆ ಕ್ರೈಸ್ತರಲ್ಲಿಯೂ, ಮುಸ್ಲಿಮರಲ್ಲಿಯೂ ಗಾಢವಾಗಿ ಇರುವುದರಿಂದ ಈ ಎರಡು ಮತದವರಿಗೆ ಈ ಗ್ರಂಥದ ಹೆಸರು ಇಷ್ಟವಾಗುವುದಿಲ್ಲ. ಹಿಂದೂಗಳಿಗೆ ಮಾತ್ರ 'ದೇವರು ಹುಟ್ಟುತ್ತಾನೆಂದು' ಮೊದಲಿನಿಂದ ನಂಬಿಕೆಯಿದೆ. ಆದುದರಿಂದ ಹಿಂದೂಗಳು ಈ ಗ್ರಂಥವನ್ನು ನಂಬಬಹುದು. ದೇವರು ಎಷ್ಟೋ ಸಲ ಹುಟ್ಟಿದ್ದಾನೆಂದು, ಈದಿನ ದೇವತೆಗಳಾಗಿ ಎಷ್ಟೋ ಜನರನ್ನು ಹೇಳುತ್ತಿರುವವರೆಲ್ಲರೂ ದೇವರ ಅವತಾರವೇಯೆಂದು ಹಿಂದೂಗಳು ಅಂದುಕೊಳ್ಳುವುದು ನಡೆಯುತ್ತಿದೆ. ಆದರೆ ಎಲ್ಲಾ ವಿಧಗಳಲ್ಲಿ ದೇವರುಗಳು ದೇವರ ಅವತಾರ ಅಲ್ಲವೆಂದು ಅವರಿಗೆ ತಿಳಿದಿಲ್ಲ. ದೇವರು ಭೂಮಿಮೇಲಕ್ಕೆ ಮನುಷ್ಯರ ಮಧ್ಯದೊಳಗೆ ಬರುವುದು ವಾಸ್ತವವೇ, ಆದರೂ ಹಿಂದೂಗಳು ಅಂದುಕೊಂಡಂತೆ ದೇವರು ಅವತರಿಸಲಿಲ್ಲ. ದೇವರು ತನ್ನ ಅವಶ್ಯಕತೆ ಬಂದಾಗ ಮಾತ್ರವೇ ಅಪರೂಪವಾಗಿ ಬರುತ್ತಾನಾಗಲಿ, ಹಿಂದೂಗಳು ಅಂದುಕೊಂಡಂತೆ ದೇವತೆಗಳೆಲ್ಲರೂ ದೇವರಲ್ಲ. ದೇವರು ಇದಕ್ಕುಮೊದಲು ಯಾವಾಗ ಬಂದಿದ್ದಾನೊ ತಿಳಿಯದ ಸ್ಥಿತಿಯಲ್ಲಿ ಮನುಷ್ಯರಿದ್ದಾರೆ. ಅಂತಹವರಿಗೆ ದೇವರು ಯಾವಾಗ ಬರುತ್ತಾನೊ ಯಾವ ಮಾತ್ರವೂ ತಿಳಿದಿಲ್ಲ.

**ಪ್ರಶ್ನೆ :– ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಧರ್ಮಗಳಿಗೆ ಆತಂಕ ಏರ್ಪಟ್ಟಾಗ, ಧರ್ಮಗಳು ತಿಳಿಯದಂತೆ ಹೋದಾಗ, ಅಧರ್ಮಗಳು ಧರ್ಮಗಳಾಗಿ, ಧರ್ಮಗಳು ಅಧರ್ಮಗಳಾಗಿ ಮನುಷ್ಯರ ಮಧ್ಯದಲ್ಲಿ ಬದಲಾಗಿಹೋದಾಗ, ಪುನಃ ಧರ್ಮಗಳನ್ನು ತಿಳಿಸುವುದಕ್ಕೆ, ಅಧರ್ಮಗಳನ್ನು ನಿರ್ಮೂಲಿಸುವುದಕ್ಕೆ ದೇವರು ಬರುತ್ತೇನೆಂದು ಹೇಳಿದ್ದಾನೆ. ನೀವು ದೇವರು ಯಾವಾಗ ಬರುವುದು ತಿಳಿದಿಲ್ಲವೆಂದು ಹೇಳುತ್ತಿದ್ದೀರೇನು?**

**ಉತ್ತರ :–** ಧರ್ಮಗಳಿಗೆ ಹಾನಿ ಉಂಟಾದಾಗ, ಅಧರ್ಮಗಳು ವಿಜೃಂಭಿಸಿದಾಗ ದೇವರು ಬರುತ್ತೇನೆಂದು ಹೇಳಿದ ಮಾತು ನಿಜವೇ! ಆದರೆ ಧರ್ಮಗಳು ಯಾವಾಗ ಇಲ್ಲದೇ ಹೋಗಿವೆಯೆಂದು, ಅಧರ್ಮಗಳು ಯಾವಾಗ ವಿಜೃಂಭಿಸಿವೆ ಯೆಂದು ಯಾರಿಗೂ ತಿಳಿದಿಲ್ಲ. ಧರ್ಮಗಳು ಚೆನ್ನಾಗಿವೆಯೆಂದು ಎಲ್ಲರೂ ಅಂದುಕೊಳ್ಳುವುದರಿಂದ, ಅಧರ್ಮಗಳು ಮನುಷ್ಯರ ಮಧ್ಯದೊಳಗೆ ಹೇಗೆ ಬರುತ್ತಿವೆಯೊ ತಿಳಿಯದಿರುವುದರಿಂದ, ದೇವರು ಕೂಡಾ ಯಾವಾಗ ಬರುವುದು ತಿಳಿದಿಲ್ಲ. ಹಿಂದೂಗಳಿಗೆ ದೇವರು ಬರುತ್ತಾನೆಂದು, ಅಧರ್ಮಗಳನ್ನು ನಿರ್ಮೂಲಿಸುತ್ತಾನೆಂದು ತಿಳಿದರೂ, ಅಧರ್ಮಗಳು ಯಾವುವೊ ತಿಳಿಯದಿರುವು ದರಿಂದ ದೇವರು ಯಾವಾಗ ಬರುವುದು ಕೂಡಾ ಗೊತ್ತಿಲ್ಲ.

ದೇವರು ಬರುತ್ತಾನೆಂದು ತಿಳಿದರೂ ಯಾವಾಗ ಬರುತ್ತಾನೊ ತಿಳಿದಯದ ಸ್ಥಿತಿಯಲ್ಲಿ ಹಿಂದೂಗಳಿರುವಾಗ, ಉಳಿದ ಎರಡು ಮತದವರು (ಕ್ರೈಸ್ತರು, ಮುಸ್ಲಿಮ್‌ರು) ದೇವರು ಬರುವುದಿಲ್ಲವೆಂದು ಧೃಢ ನಿಶ್ಚಯದಿಂದಿದ್ದಾರೆ. ಅವರ ಹಿರಿಯರು ಹಾಗೆಯೇ ಹೇಳಿದ್ದಾರೆಂದು ಅವರು ಹೇಳುತ್ತಿದ್ದಾರೆ. ಮುಸ್ಲಿಮ್‌ರು, ಕ್ರೈಸ್ತರು ಅವರ ಬೋಧಕರು ಹೇಳಿದಂತೆ ಕೇಳುತ್ತಿರುತ್ತಾರೆ. ಕ್ರೈಸ್ತರಿಗು, ಮುಸ್ಲಿಮ್‌ರಿಗು ಅವರ ಬೋಧಕರ ಮಾತುಗಳೇ ಮುಖ್ಯ. ಅವರ ಬೋಧಕರ ಮಾತುಗಳನ್ನು ಪೂರ್ತಿ ಸತ್ಯವಾಗಿ ನಂಬುತ್ತಿರುತ್ತಾರೆ. ಕ್ರೈಸ್ತರಿಗು, ಮುಸ್ಲಿಮ್‌ರಿಗು ಅವರ ಗ್ರಂಥಗಳಿಂದ ಹೆಚ್ಚಾಗಿ ಪರಿಚಯ ಇರುವುದಿಲ್ಲ. ಅವರ ಬೋಧಕರಿಗೆ ಗ್ರಂಥಗಳೊಂದಿಗೆ ಪರಿಚಯವಿರುತ್ತದೆ. ಆದುದರಿಂದ ಅವರ

ಬೋಧಕರು ಏನು ಹೇಳಿದರೂ ಗ್ರಂಥಗಳಲ್ಲಿನ ಬೋಧನೆ ಹೇಳುತ್ತಿರುತ್ತಾರೆಂದು ಮುಸ್ಲಿಮ್‌ರು, ಕ್ರೈಸ್ತರು ಅಂದುಕೊಳ್ಳುವುದು ನಡೆಯುತ್ತಿದೆ. ಕೆಲವುಕಡೆ ಬೋಧಕರು ತಮ್ಮ ಮತದವರನ್ನು ಗ್ರಂಥಗಳಲ್ಲಿನ ಬೋಧನೆಗಳನ್ನು ಹೇಳಿ ಮಭ್ಯಪಡಿಸುತ್ತಿದ್ದಾರೆ. ಗ್ರಂಥದಲ್ಲಿ ಅರ್ಥವಾಗದ ವಿಷಯಗಳ ಹತ್ತಿರ ತಾವು ತಪ್ಪುದಾರಿ ಹಿಡಿದುಹೋಗುವುದಲ್ಲದೆ, ತಮ್ಮ ಮತ ಪ್ರಜೆಗಳೆಲ್ಲರಿಗೂ ತಮಗೆ ಅರ್ಥವಾಗಿರುವುದೆ ಹೇಳಿ ಅವರನ್ನು ಕೂಡಾ ತಪ್ಪುದಾರಿ ಹಿಡಿಸುತ್ತಿದ್ದಾರೆ. ಈ ವಿಧವಾಗಿ ಪ್ರಜೆಗಳಲ್ಲಿ ಬೋಧಕರ ಮೇಲೆ ಪೂರ್ತಿ ವಿಶ್ವಾಸವಿದ್ದರೂ, ಬೋಧಕರ ಕೆಲವು ಅಪಾರ್ಥಗಳಿಂದ ಪ್ರಜೆಗಳೆಲ್ಲರೂ (ಆ ಮತಸ್ಥರೆಲ್ಲರೂ) ತಪ್ಪುದಾರಿ ಹಿಡಿದುಹೋಗುತ್ತಿದ್ದಾರೆ. ಮೂರು ಮತಗಳಿಗು ಸಂಬಂಧಿಸಿದ ಮೂರು ದೈವಗ್ರಂಥಗಳಲ್ಲಿ ದೇವರು ಹುಟ್ಟುವುದಿಲ್ಲವೆಂದು ಎಲ್ಲಿಯೂ ಹೇಳದಿದ್ದರೂ, ಬೋಧಕರಾದವರು ಆ ವಿಷಯವನ್ನು ಗ್ರಂಥದಿಂದ ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋಗುವುದರಿಂದ, ಉಳಿದವರೆಲ್ಲರೂ 'ದೇವರು ಮನುಷ್ಯನಾಗಿ ಮನುಷ್ಯರ ಮಧ್ಯದೊಳಗೆ ಬರುವುದಿಲ್ಲವೆಂದು' ಅಂದುಕೊಳ್ಳುತ್ತಿದ್ದಾರೆ. ಅದರಿಂದ ದೈವ ಗ್ರಂಥಗಳಲ್ಲಿ ಹೇಳಲಾದ ದೇವರ ಮಾತು ಪ್ರಜೆಗಳವರೆಗು ಸೇರಲಾರದೆಹೋಗಿದೆ.

**ಪ್ರಶ್ನೆ:– ಮೂರು ಮತಗಳ ಮನುಷ್ಯರಿಗೆ ಗುರುಗಳ ಬೋಧನೆಗಳೇ ಮುಖ್ಯವಾಗಿ ಇವೆ ಎನ್ನುವುದು ಸತ್ಯವೇ. ಆದರೆ 'ದೇವರು ಹುಟ್ಟುವುದಿಲ್ಲ' ಎನ್ನುವ ಒಂದು ವಿಷಯದಲ್ಲಿ ಮಾತ್ರ ತಪ್ಪುದಾರಿ ಹಿಡಿದಿದ್ದಾರಾ? ಉಳಿದ ವಿಷಯಗಳಲ್ಲಿ ಕೂಡಾ ತಪ್ಪುದಾರಿ ಹಿಡಿದಿದ್ದೀರಾ?**

**ಉತ್ತರ :–** ಉಳಿದ ವಿಷಯುಗಳಲ್ಲಿ ಕೂಡಾ ಕೆಲವುಕಡೆ ಗ್ರಹಿಸುವ ಲೋಪವಿರಬಹುದು ಆದರೆ, ಈಗ ನಾವು ತಿಳಿಯಬೇಕಾದ ವಿಷಯ 'ದೇವರ ಬರುವಿಕೆ ಪ್ರಜೆಗಳ ಮಧ್ಯದೊಳಗೆ ಇದೆಯಾ ಇಲ್ಲವಾ!' ಎನ್ನುವುದೇ ಮುಖ್ಯ. ಗ್ರಂಥದಲ್ಲಿ ದೈವಸಂಬಂಧವಾದ ವಿಷಯಗಳು ಎಷ್ಟೋ ಇವೆ. ಎಲ್ಲಾ ಸಕ್ರಮವಾಗಿ ಅರ್ಥವಾದರೆ ಮನುಷ್ಯರು 'ಮಾನವರು' ಎನಿಸಿಕೊಳ್ಳುವುದಿಲ್ಲ. ಮಾಯೆ ಮನುಷ್ಯನಲ್ಲಿ ಕೆಲಸ ಮಾಡುವುದರಿಂದ ಮನುಷ್ಯ ಮಾನವನೆನಿಸಿಕೊಂಡಿದ್ದಾನೆಂದು

**"ಆದಿತ್ಯ"** ಗ್ರಂಥದಲ್ಲಿ ಹೇಳಿಕೊಂಡಿದ್ದೇವೆ. **ಮಾಯೆ ಇಲ್ಲದ ಮನುಷ್ಯ ಇಲ್ಲ.** ಆದ್ದರಿಂದ ಎಲ್ಲಾ ವಿಷಯಗಳು ಸರಿಯಾಗಿ ಅರ್ಥವಾಗದೆ ಇರುವುದಕ್ಕೆ ಅವರಲ್ಲಿ ಮಾಯ ಪ್ರಭಾವವೇಯೆಂದು ಅರ್ಥವಾಗುತ್ತಿದೆ. ಗ್ರಂಥದಲ್ಲಿ ಕೆಲವು ಪೂರ್ತಿ ದೈವ ಸಂಬಂಧ ವಿಷಯಗಳು ಇರುವಾಗ, ಕೆಲವು ಮಾಯೆ ಸಂಬಂಧ ವಿಷಯಗಳು ಕೂಡಾ ಇವೆ. ದೇವರು ಎಲ್ಲಾ ಜ್ಞಾನವನ್ನೇ ಹೇಳಿದರೂ, ಕೆಲವು ವಿಷಯಗಳಲ್ಲಿ ಮನುಷ್ಯನಲ್ಲಿನ ಮಾಯೆಯಿಂದ ಅರ್ಥವಾಗದೆ ಹೋಗಿವೆ. ಅರ್ಥವಾಗದೆ ಇರುವವೆಲ್ಲ ಮಾಯೆ ವಿಷಯಗಳಾಗಿ ಬದಲಾಗಿಹೋಗಿ ಮನುಷ್ಯರನ್ನು ತಪ್ಪುದಾರಿ ಹಿಡಿಸುತ್ತಿವೆ. ಮಾಯೆಯನ್ನು ಜಯಿಸಿದವನಿಗೆ ಮಾತ್ರ ಎಲ್ಲಾ ಜ್ಞಾನ ವಿಷಯಗಳಾಗಿಯೇ ಕಾಣಿಸುತ್ತವೆ. ಮಾಯೆ ಇಲ್ಲದವನಿಗೆ ಜ್ಞಾನ ವಿಷಯವಾಗಿ ಕಾಣಿಸಿದ ವಿಷಯವೇ, ಮಾಯೆಯಲ್ಲಿ ಇರುವವನಿಗೆ ಅಜ್ಞಾನ ವಿಷಯವಾಗಿ ಅರ್ಥವಾಗುತ್ತದೆ. ಅವನಿಗದು ಜ್ಞಾನವಾಗಿಯೇ ಕಾಣಿಸಿದರೂ ದೇವರ ದೃಷ್ಟಿಯಲ್ಲಿ ಅದು ಅಜ್ಞಾನವಾಗಿಯೇ ಕಾಣಿಸುತ್ತದೆ. ದೇವರು 'ಮನುಷ್ಯನಾಗಿ ಬರುತ್ತೇನೆಂದು' ಹೇಳಿದ ಮಾತನ್ನು ಅರ್ಥಮಾಡಿಕೊಳ್ಳದೆ 'ದೇವರು ಬರುವುದಿಲ್ಲ' ಎನ್ನುವವರು ಇದ್ದಾರೆ. ದೇವರು ಮನುಷ್ಯನಾಗಿ ಬಂದು ಎಷ್ಟೋ ಕಷ್ಟಪಟ್ಟು ಹೇಳಿದ ವಿಷಯಗಳನ್ನು ಅಜ್ಞಾನವಾಗಿ ಕೆಲವರು ಅರ್ಥಮಾಡಿಕೊಳ್ಳುವುದರಿಂದ ಅಂತಹವರ ಮೇಲೆ ದೇವರಿಗೆ ಅಯಿಷ್ಟತೆ ಏರ್ಪಡುತ್ತದೆ.

**ಪ್ರಶ್ನೆ :– ದೇವರು ಮನುಷ್ಯನಾಗಿ ಬಂದು ಹೇಳುವುದು ಒಂದು ವಿಧಾನ. ಇನ್ನೂ ಎರಡು ವಿಧಗಳಾಗಿ ಬರುತ್ತಾನೆಂದು, ಒಟ್ಟು ಮೂರು ವಿಧಗಳೆಂದು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಹೇಳಿದಂತೆ ಇದೆ. ಇದನ್ನು ಕುರಿತು ನೀವೇನು ಹೇಳುತ್ತೀರ?**

**ಉತ್ತರ :–** ಅಂತಿಮ ದೈವ ಗ್ರಂಥದಲ್ಲಿ ಸೂರಾ 42ರಲ್ಲಿ, 51ನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾರೆ. **(42–51) "ದೇವರು ಯಾವ ಮಾನವನೊಂದಿಗೆ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ**

**ಸಾಧ್ಯವಾಗುವ ಕೆಲಸವಲ್ಲ, ದೇವರು ತನ್ನ ಜ್ಞಾನವನ್ನು 'ವಾಣಿ' ಮೂಲಕ (ವಹಿ ಮೂಲಕ) ಅಥವಾ ತೆರೆಯಮರೆಯಿಂದಲೋ ಮನುಷ್ಯನಿಗೆ ಸೇರಿಸುತ್ತಾನೆ ಇಲ್ಲವೆ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ. ಆತನು ಮಹೋನ್ನತನು, ಎಷ್ಟೋ ವಿವೇಕವಂತನು."** ಈ ವಾಕ್ಯದಲ್ಲಿ ಹೇಳಿರುವುದು ಮೂರು ವಿಧಗಳಾಗಿ ಜ್ಞಾನ ಹೇಳುತ್ತೇನೆಂದು ಹೇಳಿದ್ದಾನೆ. ಆದರೆ ಆ ಮೂರು ವಿಧಾನಗಳು ಕೇಳುವವರನ್ನು ಅನುಸರಿಸಿ ಹೇಳಬೇಕಾಗಿ ಬಂದಿದೆ. ಮಹಾಭೂತಗಳಿಗು, ಖಗೋಳಗ್ರಹಗಳಿಗು ಜ್ಞಾನ ತಿಳಿಯುವುದಕ್ಕೆ ಆಕಾಶ ಶಬ್ದದ ಮೂಲಕ ಹೇಳಬೇಕಾಗಿ ಬಂದಿದೆ. ಪ್ರವಕ್ತರಿಗೆ ನೇರವಾಗಿ ಅಲ್ಲದೆ ತೆರೆಯಮರೆಯಿಂದ ಹೇಳಬೇಕಾಗಿಬಂದಿದೆ. ಹಾಗೆಯೇ ಮನುಷ್ಯರಿಗೆ ಮಾತ್ರ ಪ್ರತ್ಯಕ್ಷವಾಗಿರುವ ತನ್ನ ಪ್ರತಿನಿಧಿಯನ್ನು ಕಳಿಸಿ ಆತನ ಮೂಲಕ ಹೇಳಿಸಬೇಕಾಗಿ ಬಂದಿದೆ. ಹೀಗೆ ಮೂರು ವಿಧಗಳೆಂದು ಅಂತಿಮ ದೈವಗ್ರಂಥದಲ್ಲಿ ಹೇಳಿದ್ದಾರೆ. ಒಂದು ಗ್ರಹಗಳಿಗೆ, ಮಹಾಭೂತಗಳಿಗಾದಾಗ, ಎರಡನೆ ವಿಧ ಪ್ರವಕ್ತರಿಗೆ ಮಾತ್ರವೇ ಆಗಿದ್ದು, ಮನುಷ್ಯರಿಗೆ ಮಾತ್ರ ಮೂರನೆಯ ವಿಧವಾಗಿ ಹೇಳುತ್ತಾನೆಂದು ತಿಳಿಯುತ್ತಿದೆ. ಹೇಗೆ ಹೇಳಿದರೂ ಮನುಷ್ಯರಿಗೆ ದೇವರ ಪ್ರತಿನಿಧಿಯಿಂದ ಜ್ಞಾನ ಹೇಳಲ್ಪಡುತ್ತದೆ.

**ಪ್ರಶ್ನೆ :– ಮನುಷ್ಯರಿಗೆ ತಿಳಿಸುವ ಜ್ಞಾನ 'ಕಾಣಿಸುವ ದೈವಪ್ರತಿನಿಧಿಯಿಂದ' ಎಂದು ಹೇಳಿದ್ದೀರ. ಕಾಣಿಸುವ ಪ್ರತಿನಿಧಿ ಮನುಷ್ಯನ ಆಕಾರದಲ್ಲಿಯೇ ಇರುತ್ತಾನೆ. ಮನುಷ್ಯನಾಗಿರುವವನು ಹೇಳಿದರೆ ಮನುಷ್ಯರಿಗೆ ತಿಳಿಯುತ್ತದೆ. ಅಷ್ಟೇ ಅಲ್ಲವೆ!**

**ಉತ್ತರ :–** ಹೌದು! ಮನುಷ್ಯನ ಆಕಾರದಲ್ಲಿರುವ ವ್ಯಕ್ತಿ ಹೇಳಿದಾಗಲೇ ಮನುಷ್ಯರು ಕೇಳುತ್ತಾರೆ. ಕಾಣಿಸುವ ಪ್ರತಿನಿಧಿ ಮನುಷ್ಯನೇಯೆಂದು ತಿಳಿಯುತ್ತಿದೆ. 'ನನ್ನ ಜ್ಞಾನ ನನಗೆ ಹೊರತು ಯಾವ ಮಾನವನಿಗು ತಿಳಿಯುವುದಿಲ್ಲವೆಂದು' ದೇವರೇ ಒಂದುಕಡೆ ಅಂತಿಮ ದೈವಗ್ರಂಥದಲ್ಲಿಯೇ ಮೂರನೇ ಸೂರಾ, ಏಳನೇ ಆಯತ್ (3–7)ರಲ್ಲಿ ಹೇಳಿದಂತೆ ಇದೆ. ಹಾಗಿರುವಾಗ ಮನುಷ್ಯನಾಗಿರುವವನು ದೈವಜ್ಞಾನವನ್ನು ಮನುಷ್ಯರಿಗೆ ಹೇಗೆ ಹೇಳುತ್ತಾನೆ? ಎಂದು ಅನುಮಾನ

ಬರುತ್ತದೆ. ಆದರೆ ದೇವರು ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ ಎಂದಾಗ ಆತನನ್ನು 'ದೇವದೂತ' ಎಂದು ಹೇಳುತ್ತಿದ್ದಾರೆ. ದೇವದೂತ ಅವಶ್ಯಕತೆಯನ್ನನು ಸರಿಸಿ ಭೂಮಿಮೇಲೆ ಬಂದು ತಾನು ಹೇಳಬೇಕಾದ ಜ್ಞಾನವನ್ನು ಹೇಳಿ ಪುನಃ ಆಕಾಶದೊಳಗೆ ಹೋಗುತ್ತಾನೆಂದೊ, ಅಥವಾ ಕಾಣಿಸದಂತೆ ಹೋಗುತ್ತಾನೆಂದೊ ಹೇಳುತ್ತಿರುತ್ತಾರೆ. ಆದರೆ ಹಾಗೆ ಬಂದು ಹೇಳಿಹೋಗುವವರು ಯಾರೂ ಇಲ್ಲ. ದೇವದೂತರು ಬಂದು ಮಾತನಾಡಿಹೋದ ಪ್ರತ್ಯಕ್ಷ ಅನುಭವಗಳು ಎಲ್ಲಿಯೂ ಇಲ್ಲ. ಹಾಗೆ ನಡೆದಿದೆಯೆಂದು ಗ್ರಂಥಗಳಲ್ಲಿ ಬರೆದಾಗ ಕೇಳಿದ್ದೇವೆ ಹೊರತು, ಪ್ರತ್ಯಕ್ಷ ಪ್ರಮಾಣ ಎಲ್ಲಿಯೂ ಇಲ್ಲ. ಪ್ರಥಮ ದೈವಗ್ರಂಥದಲ್ಲಿ ಎಲ್ಲಿಯಾದರೂ ದೇವದೂತರ ಪ್ರಸಕ್ತಿಯೇ ಇಲ್ಲ. ದ್ವಿತೀಯ ದೈವಗ್ರಂಥ, ಅಂತಿಮ ದೈವಗ್ರಂಥಗಳಲ್ಲಿ ದೇವದೂತರ ಕುರಿತು ಬಂದಿದೆ. ಆದರೆ ಅಲ್ಲಿಯೂ ಕೂಡ ದೇವದೂತರು ಎಂದು ಹೇಳಲಾಗಿದೆ ಆದರೆ, 'ದೈವದೂತರು' ಎಂದು ಹೇಳಲಿಲ್ಲ' ಆದರೆ ಇಲ್ಲಿ **ಮನುಷ್ಯರಿಗೆ ಜ್ಞಾನ ಹೇಳಿರುವುದು ದೇವರ ಪ್ರತಿನಿಧಿ ಅಥವಾ ದೈವ ಪ್ರತಿನಿಧಿ** ಎಂದು ಹೇಳಬಹುದು. ದೇವರ ಪ್ರತಿನಿಧಿ ಎಂದರೆ ದೇವರೊಂದರ ಜಿರಾಕ್ಸ್ ಕಾಪೀಯಂಥವನೆಂದು ಅರ್ಥ. ಎಂದರೆ ದೇವರಿಗೆ ಸಮಾನವಾಗಿ ಕಾಣಿಸುವವನೆಂದು ಅರ್ಥ. ಈ ವಿಷಯದಲ್ಲಿ ಬಹಳಮಂದಿ ಮನುಷ್ಯರು ಅಥವಾ ಮತದವರು ಗೊಂದಲದಲ್ಲಿ ಸರಿಯಾದ ಅವಗಾಹನೆ ಇಲ್ಲದೆ ಹೋಗಿದ್ದಾರೆ.

**"ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ"** ಎಂದು ಹೇಳಿದಾಗ, **"ದೈವ ಪ್ರತಿನಿಧಿ ಭೂಮಿಮೇಲೆ ಮನುಷ್ಯರಿಗೆ ಜ್ಞಾನ ಹೇಳುತ್ತಾನೆಂದು"** ತಿಳಿದಾಗ ಆ ದೈವ ಪ್ರತಿನಿಧಿಗೆ ದೇವರ ಜ್ಞಾನ ಹೇಗೆ ತಿಳಿದಿದೆ? ದೈವ ಜ್ಞಾನವನ್ನು ಹೇಳುತ್ತಿದ್ದಾನೆ ಎಂದರೆ ಆತನು ಯಾರಾದರೂ ದೇವರೇ ಆಗಬಹುದಲ್ಲವೆ! **ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ ಎನ್ನುವ ಸೂತ್ರದ ಪ್ರಕಾರ ದೈವಜ್ಞಾನವನ್ನು ಹೇಳುವವನು ಯಾರಾದರೂ ದೇವರೇ ಆಗುತ್ತಾನೆಂದು ಹೇಳಬಹುದು.** ಅಷ್ಟೇ ಅಲ್ಲದೆ ದೇವರು ತಾನು ಅವತರಿಸುತ್ತೇನೆಂದು ಮೂರು ಗ್ರಂಥಗಳಲ್ಲಿ ಹೇಳಿದ್ದರೂ, ದೇವರ ಮಾತನ್ನು ತಪ್ಪಾಗಿ

ವರ್ಣಿಸಿ ಹೇಳುವ ಮನುಷ್ಯರನ್ನು ನೋಡಿ ದೇವರಿಗೆ ಕೋಪ ಬಾರದೆ ತಪ್ಪುವುದಿಲ್ಲ. **ದೈವಜ್ಞಾನಕ್ಕೆ ವಿರೋಧವಾಗಿ ಹೇಳುವವರಿಗೆ ಕ್ಷಮಿಸಲಾರದ ಪಾಪವನ್ನು ಅಂಟಿಕೊಳ್ಳುವಂತೆ ದೇವರು ಮಾಡುತ್ತಾನೆ**. ದೇವರ ಜ್ಞಾನ ವಿಷಯದಲ್ಲಿ ತಪ್ಪಾದ ನಿರ್ಣಯವನ್ನು ತೆಗೆದುಕೊಳ್ಳುವವರಿಗೆ, ತನ್ನ ಜ್ಞಾನವನ್ನು ಸರಿಯಾದ ಪದ್ಧತಿಯಲ್ಲಿ ಅರ್ಥವಾಗದಂತೆ ದೇವರೇ ಮಾಡುತ್ತಾನೆ. ಅಂತಹವರಿಗೆ ದೈವಜ್ಞಾನದಲ್ಲಿ ಯಾವ ವಾಕ್ಯವು ಕೂಡಾ ಸರಿಯಾಗಿ ಅರ್ಥವಾಗದಂತೆ ಬೇರೆಯಾಗಿ ಅರ್ಥವಾಗಬಲ್ಲದು. ಆಗ ಅವನಿಗೆ ದೈವಜ್ಞಾನ ತಿಳಿಯುವ ಅವಕಾಶವೇ ಇಲ್ಲದೇ ಹೋಗುತ್ತದೆ.

ದೇವರು ತನ್ನ ಜ್ಞಾನವನ್ನು ಮಾತುಗಳಿಂದ ಹೇಳಿದರೂ, ಅದೇ ಜ್ಞಾನವನ್ನೇ ಗ್ರಂಥರೂಪದಲ್ಲಿ ತಯಾರು ಮಾಡಿಸಿಕೊಟ್ಟಿದ್ದಾನೆ. ಅದೇ ವ್ಯಾಸನಿಂದ ಬರೆಸಿರುವುದು **"ಭಗವದ್ಗೀತೆ"**. ಆ ಭಗವದ್ಗೀತೆಯನ್ನೇ **'ಪ್ರಥಮ ದೈವಗ್ರಂಥ'** ಎಂದು ಕರೆಯುತ್ತಿದ್ದೇವೆ. ಮೊದಲು ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಪುನಃ ದೇವರು ಹೇಳಿದಂತೆ ಗ್ರಂಥರೂಪವಾದ ಭಗವದ್ಗೀತೆಯಲ್ಲಿನ ಜ್ಞಾನವೇ ಉಳಿದ ಮಧ್ಯಮ, ಅಂತಿಮ ದೈವಗ್ರಂಥಗಳಲ್ಲಿ ಕೂಡಾ ಬರೆಯಲಾಗಿದೆ. ಒಂದೇ ದೈವಜ್ಞಾನ ಮೂರು ಗ್ರಂಥಗಳಲ್ಲಿ ಇದ್ದರೂ, ಮನುಷ್ಯ ಅದನ್ನು ಯಾವ ಮಾತ್ರವೂ ಗ್ರಹಿಸದೆ ಮೂರು ಗ್ರಂಥಗಳಲ್ಲಿನ ಜ್ಞಾನ ಬೇರೆಬೇರೆ ದೇವರದೆಂದು ಹೇಳಿದಾಗ, ಇದು ದೇವರ ಬರುವಿಕೆಯನ್ನು ಪ್ರೋತ್ಸಹಿಸಿದಂತೆ ಅಲ್ಲವೆ! ಮನುಷ್ಯರಲ್ಲಿನ ಈ ಲೋಪವನ್ನು ದೇವರೇ ತನ್ನ ಜ್ಞಾನದಿಂದ ತೊಲಗಿಸಬೇಕು. ಆದ್ದರಿಂದ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"** ಎನ್ನುವ ಆಲೋಚನೆ ಬರುತ್ತಿದೆ.

**ಪ್ರಶ್ನೆ :- ದೇವರು ಬರುವುದಿಲ್ಲ ಎಂದು ಎಲ್ಲರೂ ಹೇಳುತ್ತಿರುವಾಗ! ನೀವು ಅದೇ ವಿಷಯದ ಮೇಲೆ ದೇವರ ಬರುವಿಕೆಗೆ ಇದು ಸಮಯವಲ್ಲವೇ? ಎಂದು ಹೇಳುತ್ತಿದ್ದೀರ.**

**ಉತ್ತರ :-** ಧರ್ಮಗಳು ಅಧರ್ಮಗಳಾಗಿ ಬದಲಾದಾಗ ನಾನು ಬರುತ್ತೇನೆಂದು

ದೇವರು ಹೇಳಿದ್ದಾನೆ. ಧರ್ಮಗಳು ತಿಳಿಯದೇ ಹೋಗಿ ಅಧರ್ಮಗಳೇ ಹೆಚ್ಚಾಗಿ ಆಚರಣೆಯಲ್ಲಿ ಇರುವಾಗ, ಅಧರ್ಮಗಳೊಂದಿಗೆ ಅನುಬಂಧವಾದ ಅಜ್ಞಾನ ಎಷ್ಟೋ ವಿಧಗಳಾಗಿ ಇರುತ್ತದೆ. ಅವುಗಳಲ್ಲಿ 'ದೇವರು ಬರುವುದಿಲ್ಲ' ಎನ್ನುವುದು ಕೂಡಾ ಒಂದು ಅಜ್ಞಾನವೇ ಆಗುತ್ತದೆ. ದೇವರು ಬರುವುದಿಲ್ಲ ಎನ್ನುವ ಕ್ರೈಸ್ತರು, ಮುಸ್ಲಿಮ್‌ರು ಇದ್ದರೆ "ದೇವರು ಬಂದರೆ, ಅವನು ನನಗೆ ಕಾಣಿಸಿದರೆ ಆಗ ಅವನ ಕಥೆ ಹೇಳುತ್ತೇನೆ" ಎಂದು ಕೋಪವನ್ನು ಪ್ರದರ್ಶಿಸುವ ಹಿಂದೂಗಳು ಇದ್ದಾರೆ. 'ದೇವರೇ ಸ್ವತಃವಾಗಿ ತನಗೆ ಅನ್ಯಾಯ ಮಾಡಿದ್ದಾನೆಂದು, ಕಾಣಿಸಿದರೆ ಆಗ ನಿಲ್ಲಿಸಿ ಕೇಳುತ್ತೇನೆನ್ನುವವರು ಇದ್ದಾರೆ. ದೇವರ ಮೇಲೆ ಅನೇಕ ವಿಧಗಳ ಆರೋಪಣೆಗಳು ಮಾಡುವ ಹಿಂದೂಗಳು ಬಹಳಜನ ಇದ್ದಾರೆ. 'ತಮಗೆ ಭಯಪಟ್ಟು ದೇವರು ಬಚ್ಚಿಟ್ಟುಕೊಂಡಿದ್ದಾನೆನ್ನುವವರೂ' ಇದ್ದಾರೆ. ಯಾರು ಹೇಗೆ ಮಾತನಾಡಿದರು ದೇವರು ಯಾರನ್ನೂ ಪ್ರಶ್ನಿಸುವುದಿಲ್ಲ. ಆದ್ದರಿಂದ ತಾವು ದೇವರಿಗಿಂತ ದೊಡ್ಡದಾಗಿ ಮಾತನಾಡುತ್ತೇವೆ ಎನ್ನುವವರೂ ಇದ್ದಾರೆ. ಒಟ್ಟಾರೆ ದೇವರು ಬರುವುದಿಲ್ಲ ಎನ್ನುವ ಭಾವವನ್ನೇ ಮನುಷ್ಯರು ಹೊಂದಿದ್ದಾರೆ.

ದೇವರು ಭೂಮಿಮೇಲೆಗೆ ಮನುಷ್ಯರ ಮಧ್ಯದೊಳಗೆ ಬಂದು ತನ್ನ ಧರ್ಮಗಳನ್ನು ಪೂರ್ತಿ ವಿವರವಾಗಿ ಜ್ಞಾನರೂಪದಲ್ಲಿ ಹೇಳಿಹೋಗುತ್ತಾನೆಂದು ನಾವು ಹೇಳಿದರೇ, ನಮ್ಮನ್ನು ಅಜ್ಞಾನಿಗಳಲ್ಲಿ ಮೊದಲನೆಯವರಾಗಿ ಲೆಕ್ಕಿಸಿದವರೂ ಇದ್ದಾರೆ. ಆದರೆ ನಾನು ಹೇಳಿರುವುದು ವಾಸ್ತವವೇಯೆಂದು ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಆದ್ದರಿಂದ ಅವರು ಕೇಳಿರುವುದೇ ಸತ್ಯವೆಂದು ಆಯಾ ಮತ ಪ್ರಜೆಗಳು ಅಂದುಕೊಂಡರೆ, ಅವರು ಓದಿದಾಗ ಅರ್ಥವಾಗಿರುವುದೇ ಸತ್ಯವೆಂದು ಆಯಾ ಮತಬೋಧಕರು ಅಂದುಕೊಳ್ಳುವುದಾಗಿದೆ. ಹಾಗೆ ಅಂದುಕೊಳ್ಳುವುದರಿಂದ ಮತ್ತೊಬ್ಬನು ಸತ್ಯವನ್ನು ಹೇಳಿದರೂ ಅದು ಅವರಿಗೆ ಅಸತ್ಯವಾಗಿಯೇ ಕಾಣಿಸುತ್ತದೆ. ಈಗ ಒಂದು ವಿಷಯವನ್ನು ತೆಗೆದುಕೊಂಡು ನೋಡೋಣ. ನನ್ನ ಹತ್ತಿರ ವಜ್ರವಿದೆ. ನನ್ನ ಹತ್ತಿರವಿರುವ ವಜ್ರದಂಥದ್ದು ಪ್ರಪಂಚದಲ್ಲಿ ಎಲ್ಲಿಯೂ ಇಲ್ಲವೆಂದುಕೊಳ್ಳಿ. 'ನಾನು ತೋರಿಸಿದರೆ ಹೊರತು ಯಾರೂ

ಅದನ್ನು ನೋಡಲಾರರು' ಎಂದು ನಾನು ಹೇಳಿದ್ದೇನೆಂದುಕೊಳ್ಳಿ ಅದು ವಾಸ್ತವವೇ ಅಲ್ಲವೆ! ನನ್ನ ಹತ್ತಿರ ಹೊರತು ಯಾರ ಹತ್ತಿರವೂ ಇಲ್ಲದ ವಜ್ರವನ್ನು ಯಾರು ನೋಡಿದರೂ ನನ್ನ ಹತ್ತಿರವೇ ನೋಡಬೇಕು. ನನ್ನ ಹತ್ತಿರವಲ್ಲದೇ ಇತರರ ಹತ್ತಿರ ನೋಡುವುದಕ್ಕೆ ಅವಕಾಶವಿಲ್ಲ. ಯಾವಾಗ ನೋಡಿದರೂ, ಎಲ್ಲಿ ನೋಡಿದರೂ ವಜ್ರವನ್ನು ನನ್ನ ಹತ್ತಿರವೇ ನೋಡಬೇಕೇ ಹೊರತು ಅನ್ಯದಾ ಬೇರೇ ದಾರಿಯೇ ಇಲ್ಲ. ದೇಶದಲ್ಲಿ ಇನ್ನೊಬ್ಬರ ಹತ್ತಿರ ಇನ್ನೊಂದು ವಜ್ರವೆನ್ನುವುದು ಇಲ್ಲದಿರುವಾಗ, ಇರುವ ವಜ್ರ ನನ್ನ ಹತ್ತಿರ ಮಾತ್ರವೇ ಇರುವಾಗ ನನಗೆ ತಿಳಿಯದಂತೆ, ನಾನು ತೋರಿಸದೇ ಯಾರೂ ನೋಡುವುದಕ್ಕೆ ಸಾಧ್ಯವಿಲ್ಲ. ಆದರೆ ಆರುತಿಂಗಳ ಕೆಳಗೆ ನಾನಿರುವ ಸ್ಥಳಕ್ಕೆ ಮುನ್ನೂರು ಕಿಲೋಮೀಟರ್‌ಗಳ ದೂರದಲ್ಲಿ, ಒಂದು ಚಿಕ್ಕ ಹಳ್ಳಿಯಲ್ಲಿ, ಆ ಊರಿನವರು ಹತ್ತುಜನ ಒಂದೇಸಲ ವಜ್ರವನ್ನು ನೋಡಿದಂತೆ ಹೇಳಿದ್ದಾರೆ. ಒಬ್ಬ ಬಿಕ್ಷಕನ ಹತ್ತಿರ ವಜ್ರವಿರುವಂತೆ, ಆತನು ತನ್ನ ಹತ್ತಿರವಿರುವ ವಜ್ರವನ್ನು ತೋರಿಸಿದಾಗ ಹತ್ತುಜನ ಆ ವಜ್ರವನ್ನು ನೋಡಿದಂತೆ ಹೇಳಿರುವುದರಿಂದ 'ನನ್ನ ಹತ್ತಿರವಲ್ಲದೆ ವಜ್ರ ಇತರರ ಹತ್ತಿರ ಇಲ್ಲ' ಎನ್ನುವ ಮಾತನ್ನು ಕೆಲವರು ಅಸತ್ಯವೆಂದು ಅಂದುಕೊಂಡಿದ್ದಾರೆ. ಹಾಗೆಂದು ನಾನು ಅಸತ್ಯವನ್ನು ಹೇಳುವವನು ಅಲ್ಲ. ನಾನು ಹೇಳುವುದೆಲ್ಲ ಸತ್ಯವೇ.

ಆದರೇ ಅವರು ಹೇಳುವುದು ಒಂದುವೇಳೆ ಅಸತ್ಯವಾದರೆ ಆಗಬಹುದು ಆದರೆ ನಾನು ಹೇಳುವುದು ಮಾತ್ರ ನೂರಕ್ಕೆ ನೂರರಷ್ಟು ಸತ್ಯ. ಇನ್ನೊಂದು ಕಡೆ ವಜ್ರವನ್ನು ನೋಡಿದ್ದೇವೆಂದು ಹೇಳುತ್ತಿರುವ ಹತ್ತುಜನ ಅಸತ್ಯ ಹೇಳುವವರಾ! ಇಲ್ಲವೆ ಸತ್ಯ ಹೇಳುವವರಾ! ಎಂದು ನೋಡಿದರೆ, ಯಾವಕಡೆ ವಿಚಾರಿಸಿದರೂ ಅವರು ಸತ್ಯ ಹೇಳುವವರೇಯೆಂದು ಎಲ್ಲರೂ ಹೇಳುತ್ತಿದ್ದಾರೆ. ಮೇಲಾಗಿ ನಾವು ನೋಡಿರುವುದು ಸತ್ಯ ಎಂದು ಹತ್ತುಜನ ಮುಕ್ತಕಂಠದಿಂದ ಹೇಳುತ್ತಿದ್ದಾರೆ. ಅಷ್ಟೇ ಅಲ್ಲದೆ ಅವರು ನೋಡಿದ ವಜ್ರವೊಂದರ ಆಕಾರ, ಭಾರ, ಅದರಲ್ಲಿನ ಬೆಳಕು ಎಲ್ಲಾ ಸಕ್ರಮವಾಗಿ ಹೇಳುತ್ತಿದ್ದಾರೆ. ಅವರು ಹೇಳುವ ವಜ್ರವೊಂದರ

ಹೋಲಿಕೆ ನೋಡಿದರೆ ನನ್ನ ಹತ್ತಿರವಿರುವ ವಜ್ರ ಹೋಲಿಕೆಯಲ್ಲಿಯೇ ಇದೆಯೆಂದು ಹೇಳುತ್ತಿದ್ದಾರೆ. ನಾನು 'ನೀವು ವಜ್ರವನ್ನು ನೋಡಲಿಲ್ಲ' ಎಂದು ಹೇಳಿದರೂ, ಅವರು ನನ್ನ ಮಾತನ್ನು ಕೇಳದಂತೆ 'ನಿನ್ನ ಮಾತು ಸುಳ್ಳು' ಎಂದು ಅವರು ನನ್ನನ್ನು ಅಂದರೇ! 'ಅಲ್ಲ ನಿಮ್ಮ ಮಾತೇ ಅಸತ್ಯವೆಂದು' ನಾನು ಹೇಳುವುದು ನಡೆದಿದೆ. ಹೀಗೆ ನಾನೊಬ್ಬನು ಒಂದುಕಡೆ, ಆ ಹತ್ತುಜನ ಮತ್ತೊಂದುಕಡೆ ವಾದಿಸುವುದು ಬಹಳಜನ ನೋಡಿದ್ದಾರೆ. ಆದರೂ ಯಾರ ಮಾತು ಸತ್ಯ, ಯಾರ ಮಾತು ಅಸತ್ಯ ಎಂದು ಯಾವಕಡೆ ನಿರ್ಣಯಿಸಿ ಹೇಳಲಾರದೆ ಹೋಗಿದ್ದಾರೆ. ಈ ಸಮಸ್ಯೆ ಹೀಗಿರುವಾಗ ಒಬ್ಬ ಓದುಬಾರದ ಅಗಸನು ನಮ್ಮ ಊರಿನೊಳಗೆ ಬರುವುದು ನಡೆದಿದೆ. ಧನಿಕನಾದ ನನ್ನ ಮಾತನ್ನು, ಇತರ ಗ್ರಾಮಸ್ಥರಾದ ಹತ್ತುಜನರ ಮಾತನ್ನು ಎಲ್ಲರೂ ಕೇಳುವಂತೆ ಕೇಳಿದ್ದಾನೆ. ಆದರೆ ಆ ಓದುಬಾರದ ಅಗಸನಿಗೆ ಇದೇನು ದೊಡ್ಡ ಸಮಸ್ಯೆಯಂತೆ ಕಾಣಿಸಲಿಲ್ಲ. ಇಷ್ಟು ಚಿಕ್ಕ ವಿಷಯಕ್ಕೆ ಇಷ್ಟುಜನ ತಲೆಕೆಡಿಸಿಕೊಳ್ಳುವುದು ಏಕೆ? ಇದರ ವಾಸ್ತವವನ್ನು ನಾನು ಸುಲಭವಾಗಿ ಹೇಳುತ್ತೇನೆ ಕೇಳುತ್ತೀರಾ! ಎಂದು ಕೇಳಿದ್ದಾನೆ. ಆಗ ಎಲ್ಲರೂ ಆಶ್ಚರ್ಯವಾಗಿ ಆ ಅಗಸನ ಕಡೆ ನೋಡುತ್ತಾ, ನಾವು ಓದಿಕೊಂಡವರು ನಮಗಿಲ್ಲದ ತಿಳುವಳಿಕೆ ನಿನಗಿದೆಯಾ! ಇದನ್ನು ಕುರಿತು ಏನೆಂದು ಹೇಳುತ್ತೀಯಾ? ಹೇಳು ನೋಡೋಣ ಎಂದಿದ್ದಾರೆ. ಅವರ ಮಾತುಗಳು ಕೆಳಗಿನ ವಿಧವಾಗಿ ಸಾಗಿವೆ.

**ಅಗಸ :–** ಹತ್ತುಜನ ಹೇಳುವ ಮಾತನ್ನು ನಂಬುತ್ತೀರಾ! ಒಬ್ಬನು ಹೇಳುವ ಮಾತನ್ನು ನಂಬುತ್ತೀರಾ?

**ಊರಿನವರು :–** ಹತ್ತುಜನ ಒಂದೇ ಮಾತು ಹೇಳುತ್ತಿದ್ದಾರೆ ಆದ್ದರಿಂದ ಒಬ್ಬನ ಮಾತಿಗಿಂತ ಹತ್ತುಜನ ಹೇಳುವ ಮಾತನ್ನೇ ಸತ್ಯವೆಂದು ನಂಬಬಹುದು. ಒಬ್ಬನು ಅಸತ್ಯವಾದರೂ ಹೇಳಬಹುದು ಅಥವಾ ಸತ್ಯವಾದರೂ ಹೇಳಬಹುದು.

**ಅಗಸ :–** ಹತ್ತುಜನ ಒಬ್ಬ ಭಿಕ್ಷಕನ ಹತ್ತಿರ ವಜ್ರವನ್ನು ನೋಡಿದ್ದಾರೆ. ಅವರು ನೋಡಿರುವುದು ವಾಸ್ತವವೇ. ಆದರೆ ಭಿಕ್ಷಕನ ಹತ್ತಿರ ವಜ್ರವಿರುತ್ತದಾ?

**ಊರಿನವರು :–** ಧನಿಕನ ಹತ್ತಿರ ಇದೆಯೆಂದರೆ ನಂಬಬಹುದು ಆದರೆ, ಭಿಕ್ಷಕನ ಹತ್ತಿರ ವಜ್ರವಿದೆ ಎಂದರೆ ನಂಬುವುದಕ್ಕೆ ಸಾಧ್ಯವಿಲ್ಲ.

**ಅಗಸ :–** ಒಬ್ಬನು ಅಸತ್ಯವನ್ನಾದರೂ ಹೇಳಬಹುದು ಎನ್ನುವುದಕ್ಕೆ ಅವಕಾಶವಿರುವಂತೆ, ಬಿಕ್ಷಕನ ಹತ್ತಿರ ವಜ್ರ ಇಲ್ಲವೆನ್ನುವುದಕ್ಕೂ ಸಹ ಅವಕಾಶ ಇದೆ. ಆದರೆ ಇಲ್ಲಿ ಒಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ಬಿಕ್ಷಕನು ವಜ್ರವನ್ನು ಹತ್ತುಜನರಿಗೆ ತೋರಿಸಿದ್ದಾನೆ. ಧನಿಕನು ತನ್ನ ಹತ್ತಿರ ವಜ್ರವಿದೆಯೆಂದು ಹೇಳುತ್ತಿದ್ದಾನೆ. ಆದರೆ ಯಾರಿಗೂ ತೋರಿಸಲಿಲ್ಲ. ನಾನು ಯಾರಿಗಾದರೂ ನನ್ನ ವಜ್ರವನ್ನು ತೋರಿಸುತ್ತೇನೆಂದು ಬಿಕ್ಷಕನು ಹೇಳುವುದಲ್ಲದೆ ಹತ್ತುಜನರಿಗೆ ತೋರಿಸಿದ್ದಾನೆ. ಇನ್ಯಾರಿಗಾದರೂ ತೋರಿಸುತ್ತೇನೆನ್ನುತ್ತಿದ್ದಾನೆ. ವಜ್ರವಿದೆಯೆಂದು ಹೇಳುತ್ತಾ 'ನಾನು ಯಾರಿಗೂ ನನ್ನ ವಜ್ರವನ್ನು ತೋರಿಸುವುದಿಲ್ಲ' ಎನ್ನುವ ಧನಿಕನ ಮಾತುನ್ನು ನಂಬಿರೆನ್ನುತ್ತೀರಾ? ಆದರೂ ಧನಿಕನು ಹೇಳುವ ಮಾತುಗಳಲ್ಲಿ ನಿಜವೇ ಇದೆಯೆಂದು ತಪ್ಪದೆ ನಂಬುತ್ತೇವೆ. ಏಕೆಂದರೆ! ವಜ್ರದ ವಿಷಯವನ್ನು ಮೊದಲು ಹೇಳಿರುವುದು ಧನಿಕನೇ ಆದ್ದರಿಂದ ನಂಬಲೇಬೇಕು. ನಂಬುವುದೇ ಅಲ್ಲದೆ ಆ ಮಾತು ಸತ್ಯವೇ ಎಂದುಕೊಳ್ಳೋಣ. ಭೂಮಿಮೇಲೆ ಇರುವುದು ಒಂದೇ ವಜ್ರವಾಗಿರುವುದರಿಂದ, ಅದನ್ನು ಹೋಲಿದ ವಜ್ರ ಇನ್ನೊಂದು ಇಲ್ಲದಿರುವುದರಿಂದ ಧನಿಕನ ಹತ್ತಿರ ವಜ್ರವಿದೆ ಅಂದರೆ ಅದು ನಿಜವೇ. ಹತ್ತುಜನ ಭಿಕ್ಷಕನ ಹತ್ತಿರ ನೋಡಿದ ಮಾತು ನಿಜವೇ. ವಜ್ರ ಒಂದೇ ಇರುವಾಗ ಬಿಕ್ಷಕನು ಎರಡನೆ ವಜ್ರವನ್ನು ಹೇಗೆ ತೋರಿಸುತ್ತಾನೆ? ಎರಡನೆ ವಜ್ರ ಇಲ್ಲವೆನ್ನುವುದು ನೂರಕ್ಕೆನೂರುಪಾಲು ಸತ್ಯ. ಹಾಗೆಯೇ ಧನಿಕನ ಹತ್ತಿರವೇ ವಜ್ರವಿದೆಯೆನ್ನುವುದು ವಾಸ್ತವವೇ ಆದರೆ ಮತ್ತೊಬ್ಬ ವ್ಯಕ್ತಿ ಹತ್ತಿರ ಹತ್ತುಜನ ವಜ್ರವನ್ನು ಹೇಗೆ ನೋಡುತ್ತಾರೆ? ಹತ್ತುಜನ ಸತ್ಯವನ್ನೇ ಹೇಳುತ್ತಿದ್ದಾರೆಂದು ತಪ್ಪದೇ ನಾವು ಒಪ್ಪಿಕೊಳ್ಳಬೇಕಾಗಿದ್ದೆ. ನನ್ನ ಹತ್ತಿರ ಹೊರತು ಯಾರ ಹತ್ತಿರವು ವಜ್ರ ಇಲ್ಲವೆಂದು ನಿರ್ಣಯಿಸಿ ಹೇಳಿದಾಗ ಮುನ್ನೂರು ಕಿಲೋಮೀಟರ್‌ಗಳ ದೂರದಲ್ಲಿ ವಜ್ರವಿದೆಯೆಂದರೆ, ಅಲ್ಲಿ ಹತ್ತುಜನ ವಜ್ರವನ್ನು ನೋಡಿದ್ದಾರೆ

ಎಂದರೆ, ವಜ್ರ ಇರುವಕಡೆ ಧನಿಕನಾದರೂ ಇರಬೇಕು ಅಥವಾ ಧನಿಕನಿರುವ ಕಡೆ ವಜ್ರವಾದರೂ ಇರಬೇಕು. ಈಗ ಚೆನ್ನಾಗಿ ಆಲೋಚಿಸಿದರೆ ಧನಿಕನಿರುವಕಡೆ ವಜ್ರವಿರುವುದು ಎಷ್ಟು ಸತ್ಯವೊ, ವಜ್ರವಿರುವಕಡೆ ಧನಿಕನಿದ್ದಾನೆನ್ನುವುದು ಕೂಡಾ ಅಷ್ಟೇ ಸತ್ಯವಾಗುತ್ತದೆ.

**ಊರಿನವರು :–** ಧನಿಕನಿರುವ ಕಡೆ ವಜ್ರವಿದೆ ಆದರೆ, ವಜ್ರವಿರುವ ಕಡೆ ಧನಿಕನು ಇಲ್ಲ. ಅಲ್ಲಿ ಬಿಕ್ಷಕನಿದ್ದಾನೆ.

**ಅಗಸ :–** ಧನಿಕನು ದೂರ ಪ್ರಾಂತವಾದ ಮುನ್ನೂರು ಕಿಲೋಮೀಟರ್‌ಗಳ ದೂರಹೋಗಿ ಬಿಕ್ಷಕನಾಗಿ ನಟಿಸಿ ಹತ್ತುಜನರಿಗೆ ತನ್ನ ವಜ್ರವನ್ನು ತೋರಿಸಿರ ಬಹುದಲ್ಲವೆ!

**ಊರಿನವರು :–** ಧನಿಕನು 'ತನ್ನ ವಜ್ರವನ್ನು ಯಾವ ಮನುಷ್ಯನಿಗು ತೋರಿಸುವುದಿಲ್ಲ' ಎಂದು ಶಪಥ ಮಾಡಿದಂತೆ ಹೇಳಿದ್ದಾನೆ. ಹಾಗಿರುವಾಗ ತನ್ನ ವಜ್ರವನ್ನು ಹತ್ತು ಜನರಿಗೆ ತೋರಿಸುವುದಿಲ್ಲವೆಂದಲ್ಲವೇ ಅರ್ಥ.

**ಅಗಸ :–** 'ನಾನು ಯಾರಿಗೂ ವಜ್ರವನ್ನು ತೋರಿಸುವುದಿಲ್ಲ' ಎಂದು ಹೇಳಿರುವುದು ಧನಿಕನು, ಆ ಮಾತು ನಿಜವೇ. ಆದರೇ ಇಲ್ಲಿ ವಜ್ರವನ್ನು ಹತ್ತು ಜನರಿಗೆ ತೋರಿಸಿರುವುದು ಧನಿಕನು ಅಲ್ಲ. ಬಿಕ್ಷಕನು. ಆತನು ಧನಿಕನಾಗಿ ತೋರಿಸುವುದಿಲ್ಲವೆಂದು ಹೇಳಿದ್ದಾನೆ ಹೊರತು ಬಿಕ್ಷಕನಾಗಿ ತೋರಿಸುವುದಿಲ್ಲ ವೆಂದು ಹೇಳಲಿಲ್ಲ ಅಲ್ಲವೆ! ಆದ್ದರಿಂದ ಹೇಳಿದಮಾತನ್ನು ತಪ್ಪದೆ ಧನಿಕನಾಗಿ ವಜ್ರವನ್ನು ತೋರಿಸಲಿಲ್ಲ. ಕೇವಲ ಒಬ್ಬ ಬಿಕ್ಷಕನಾಗಿ ಇರುವಾಗ ಮಾತ್ರವೇ ತನ್ನ ವಜ್ರವನ್ನು ತೋರಿಸಿದ್ದಾನೆ.

**ಊರಿನವರು :–** ಹಾಗೆ ಬಿಕ್ಷಕನಾಗಿರುತ್ತಾ ಆಗ ಏಕೆ ತನ್ನ ವಜ್ರವನ್ನು ತೋರಿಸಿದ್ದಾನೆ?

**ಅಗಸ :–** ತನ್ನ ವಜ್ರ ಎಂಥದ್ದೊ ಇತರರಿಗೆ ತಿಳಿಯುವುದಕ್ಕೆ, ಮೊದಲು

ಹೇಳಿದ ತನ್ನ ಮಾತನ್ನು ಮೀರದಂತೆ, ಧನಿಕನಾಗಿರುವಾಗ ಅಲ್ಲದೆ ಬಿಕ್ಷಕನಾಗಿ ಇರುವಾಗಲೇ ತೋರಿಸಿದ್ದಾನೆ. ಹಾಗೆ ತೋರಿಸುವುದರಿಂದ ವಜ್ರ ಎಂದರೆ ಏನು? ಎಂದು ಇತರರಿಗೆ ತಿಳಿದಿದೆ. ವಜ್ರ ಬಹಳ ಪ್ರಕಾಶವಂತವಾಗಿ ಇರುತ್ತದೆಂದು ತಿಳಿಯುವುದರಿಂದ ವಜ್ರಕಾಂತಿಯನ್ನು ನೋಡಿದರೇ ಕೆಲವು ಕಣ್ಣಿನ ರೋಗಗಳು ಹೋಗುತ್ತವೆಂದು ತಿಳಿಯುವುದರಿಂದ, ಎಲ್ಲರೂ ವಜ್ರವನ್ನು ನೋಡಬೇಕೆಂದು ಅಂದುಕೊಳ್ಳುತ್ತಾರೆ. ಹಾಗೆ ವಜ್ರವನ್ನು ಯಾರೂ ನೋಡದಿದ್ದರೆ, ಅದರ ಬೆಲೆ ಸ್ವಲ್ಪವೂ ಇತರರಿಗೆ ತಿಳಿಯದೇ ಹೋದರೆ, ಧನಿಕನ ಹತ್ತಿರ ವಜ್ರವಿದೆಯೆಂದರೂ ಅದು ಬೆಲೆ ಇಲ್ಲದ್ದಾಗಿಯೇ ಇರುತ್ತದೆ. ಯಾವುದೇ ಬೆಲೆ ತಿಳಿಯದಿರುವುದು ಏನಾದರೂ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ! ಯಾರಿಗಾದರೂ ಹಣದ ಬೆಲೆ ತಿಳಿಯುವುದರಿಂದ ಯಾರಾದರೂ ಕೋಟೀಶ್ವರ ನಿದ್ದಾನೆಂದರೇ ಆತನನ್ನು ದೊಡ್ಡವನನ್ನಾಗಿ (ದೊಡ್ಡ ಧನಿಕನನ್ನಾಗಿ) ಅಂದು ಕೊಳ್ಳುತ್ತೇವೆ. ಹಣ ಎಂದರೇ ಏನೋ ತಿಳಿಯದಿರುವಾಗ ಕೋಟೀಶ್ವರನು ನಮ್ಮ ಪಕ್ಕದಲ್ಲಿದ್ದರೂ ಅವನನ್ನು ದೊಡ್ಡದಾಗಿ ನೋಡುವುದಿಲ್ಲ. ಹಾಗೆಯೇ ವಜ್ರದ ಬೆಲೆ ತಿಳಿಯದಿದ್ದರೆ ವಜ್ರ ತನ್ನ ಹತ್ತಿರವಿದ್ದರೂ ತನಗೇನು ಬೆಲೆ ಇರುವುದಿಲ್ಲವೆಂದು, ವಜ್ರವನ್ನು ಕುರಿತು ಇತರರಿಗೆ ತಿಳಿಯುವಂತೆ ಬಿಕ್ಷಕನ ವೇಷದಲ್ಲಿ ಧನಿಕನೇ ತನ್ನ ವಜ್ರವನ್ನು ಹತ್ತುಜನರಿಗೆ ತೋರಿಸಿದ್ದಾನೆ. ಆದರೇ ಈ ಧನಿಕನೇ ಆ ಬಿಕ್ಷಕನು, ಅಥವಾ ಆ ಬಿಕ್ಷಕನೇ ಈ ಧನಿಕನೆಂದು ಯಾರೂ ಊಹಿಸಲಾರದೆಹೋಗಿದ್ದಾರೆ. ಹತ್ತುಜನ ವಜ್ರವನ್ನು ನೋಡಿರುವುದರಿಂದ, ವಜ್ರದ ಬೆಲೆ ಎಲ್ಲರಿಗೂ ತಿಳಿದುಹೋಗಿರುವುದರಿಂದ, ನಿಜವಾಗಲು ವಜ್ರವಿರುವ ಧನಿಕನನ್ನು ಎಲ್ಲರೂ ದೊಡ್ಡದಾಗಿ ಹೇಳಿಕೊಂಡು ಗೌರವಿಸುತ್ತಾರೆ. ತನ್ನ ವಜ್ರದ ಬೆಲೆ ತಿಳಿಯದಿದ್ದರೆ ತನ್ನ ಹಿರಿಮೆ ಪ್ರಜೆಗಳಿಗೆ ತಿಳಿಯುವುದಿಲ್ಲವೆಂದು, ಧನಿಕನೇ ಬಿಕ್ಷಕನಂತೆ ವಜ್ರವನ್ನು ಇತರರಿಗೆ ತೋರಿಸಿದ್ದಾನೆ ಎಂದು ತೀರ್ಮಾನಿಸಿ ಹೇಳುತ್ತಿದ್ದೇವೆ.

**ಪ್ರಶ್ನೆ :– ಧನಿಕನು ತನ್ನ ವಜ್ರವನ್ನು ಮತ್ತೊಬ್ಬನಾಗಿ (ಬಿಕ್ಷಕನಾಗಿ), ಮತ್ತೊಂದು ಊರಿನಲ್ಲಿ ಪ್ರಜೆಗಳಿಗೆ ತೋರಿಸುವುದರಿಂದ ಪ್ರಜೆಗಳು ವಜ್ರವನ್ನು ಕುರಿತು**

**ಹೇಳಿಕೊಳ್ಳುವಾಗ ಧನಿಕನೇ ಜ್ಞಾಪಕ ಬರುತ್ತಾನೆಂದು ನೀವು ಹೇಳುತ್ತಿದ್ದೀರ. ಹಾಗೇಕೆ ಅಂದುಕೊಳ್ಳಬೇಕು? ಬಿಕ್ಷಕನ ಹತ್ತಿರವೇ ವಜ್ರವಿದೆಯೆಂದು, ಬಿಕ್ಷಕನನ್ನು ಜ್ಞಾಪಕ ಮಾಡಿಕೊಳ್ಳಬಹುದಲ್ಲವೆ!**

**ಉತ್ತರ :-** ಬಿಕ್ಷಕನು ಕೆಲವು ದಿನಗಳು ಮಾತ್ರ ಕಾಣಿಸಿ ವಜ್ರವನ್ನು ತೋರಿಸಿಹೋಗಿದ್ದಾನೆ. ನಂತರ ಬಿಕ್ಷಕನು ಲೋಕದಲ್ಲಿಯೇ ಇಲ್ಲ ಎಲ್ಲಿಗೊ ಹೋಗಿದ್ದಾನೆಂದು ತಿಳಿದಿದೆ. ಕಾಣಿಸುವವನು ಮಾತ್ರ ಧನಿಕನೇ. ಆದರೇ ಬಿಕ್ಷಕನ ಹತ್ತಿರ ವಜ್ರವನ್ನು ನೋಡಿರುವುದಕ್ಕೆ, ವಜ್ರವನ್ನು ಕುರಿತು ಆಲೋಚನೆ ಬಂದಾಗ ಕೆಲವರಿಗೆ ಬಿಕ್ಷಕನು ಜ್ಞಾಪಕ ಬಂದಿದ್ದಾನೆ, ಕೆಲವರಿಗೆ ಧನಿಕನು ಜ್ಞಾಪಕ ಬಂದಿದ್ದಾನೆ. ಪ್ರತ್ಯಕ್ಷವಾಗಿ ನೋಡಿದವರು ವಜ್ರವನ್ನು ಕುರಿತು ಹೇಳಿದಾಗ, ನೋಡದವರು ವಜ್ರ ಧನಿಕನ ಹತ್ತಿರವಿದೆಯೆಂದು ಧನಿಕನನ್ನು ಜ್ಞಾಪಕ ಮಾಡಿಕೊಳ್ಳುತ್ತಿದ್ದರು. ಹೀಗೆ ವಜ್ರ ವಿಷಯದಲ್ಲಿ ಒಂದುಕಡೆ ಕೆಲವರಿಗೆ ಬಿಕ್ಷಕನು ಜ್ಞಾಪಕಬಂದು, ಮತ್ತೊಂದು ಕಡೆ ಮತ್ತೆ ಕೆಲವರಿಗೆ ಧನಿಕನು ಜ್ಞಾಪಕ ಬರುವುದು ನಡೆಯುತ್ತಿತ್ತು. ವಜ್ರ ಒಂದೇ ಆದರೂ ಅದರ ವಿಷಯದಲ್ಲಿ ಬಿಕ್ಷಕನು ಧನಿಕನು ಇಬ್ಬರು ಜ್ಞಾಪಕ ಬರುವುದು ನಡೆಯುತ್ತಿತ್ತು. ಆದರೇ ಸ್ವಲ್ಪ ಕಾಲ ಕಳೆದನಂತರ ಬಹಳಜನ ವಜ್ರವನ್ನು ಮರೆತುಹೋಗಿದ್ದಾರೆ. ವಜ್ರವನ್ನು ಮರೆತು ಹೋಗುವುದರಿಂದ ಇತ್ತ ಧನಿಕನಾಗಲಿ, ಅತ್ತ ಬಿಕ್ಷಕನಾಗಲಿ ಯಾರೂ ಜ್ಞಾಪಕ ಬರುತ್ತಿಲ್ಲ. ಅಂತಹ ಸಮಯದಲ್ಲಿ ಬಿಕ್ಷಕನು ಕಾಣಿಸುವ ತನ್ನ ಹತ್ತಿರವಿರುವ ವಜ್ರವನ್ನು ಸಾವಿರ ಜನರಿಗೆ ತೋರಿಸುವುದಾಗಿದೆ. ಅಷ್ಟೇ ಅಲ್ಲದೆ ಇಂತಹ ಧನಿಕನ ಹತ್ತಿರ ಇರುವ ವಜ್ರವೇ ಇದು ಎಂದು ಹೇಳುವುದು ಕೂಡಾ ನಡೆದಿದೆ ಹಾಗೆ ತೋರಿಸಲಾದ ವಜ್ರದಿಂದ ಈಸಲ ಧನಿಕನನ್ನು, ಬಿಕ್ಷಕನನ್ನು ಇಬ್ಬರನ್ನು ಎಲ್ಲರೂ ಜ್ಞಾಪಕ ಮಾಡಿಕೊಳ್ಳುವುದು ನಡೆಯುತ್ತಿತ್ತು. ಅಷೇ ಅಲ್ಲದೆ ಧನಿಕನ ಹತ್ತಿರವಿರುವ ವಜ್ರವೇ ಎಂದು ಕೂಡಾ ಹೇಳಿಕೊಳ್ಳುವುದಾಗಿದೆ.

**ಪ್ರಶ್ನೆ :- "ಇನುಮುನ ಚೇಸಿನ ಮೈನಪು ಕಡ್ಡೀ, ಮುಂಟಿಮೊನ ನರ್ರಾವುಲ ದೊಡ್ಡಿ, ಕೂರ್ಚುಂಡಿ ಮೇಪಿನ ಕುಂದನಪು ಗಡ್ಡಿ, ವಿಪ್ಪಿ ಚೆಪ್ಪುರಾ ವೇಮಾರೆಡ್ಡಿ"**

**ಎಂದು ಮನಸ್ಸನ್ನು ಕುರಿತು ವೇಮನ ಯೋಗಿ ಒಂದು ಪದ್ಯವನ್ನು ಹೇಳಿದಂತೆ ಮನಸ್ಸು ಒಂದು ವಿಷಯದ ಮೇಲೆ ಇರದೆ ಅನೇಕ ವಿಷಯಗಳ ಮೇಲೆಗೆ ಹೋಗುತ್ತಿರುತ್ತದೆ. ಈಗ ಅದೇ ವಿಧವಾಗಿ ನಾವು "ದೇವರ ಬರುವಿಕೆಗೆ ಇದು ಸಮಯ ಅಲ್ಲವಾ?" ಎಂದು ಮೊದಲು ಮಾಡಿ, ದೇವರು ಬರುತ್ತಾನೆ, ಬರುವುದಿಲ್ಲ ಎಂದುಕೊಳ್ಳುತ್ತಾ ಕೊನೆಗೆ ಎಲ್ಲಿಗೋ ಹೋಗಿ ಧನಿಕನು, ಬಿಕ್ಷುಕನು, ವಜ್ರ ಎಂದು ಅದರಲ್ಲಿ ಬಿದ್ದುಹೋಗಿದ್ದೇವೆ. ನಾವು ಮೊದಲು ಮಾಡಿರುವುದು ಎಲ್ಲಿ, ಮಾತನಾಡುವುದು ಎಲ್ಲಿ? ಇಲ್ಲಿಯವರೆಗೂ ನಾವು ಮಾತನಾಡಿದ ವಿಷಯಕ್ಕು, ಮೊದಲು ಮಾಡಿದ ವಿಷಯಕ್ಕು ಏನಾದರೂ ಸಂಬಂಧ ಇದೆಯಾ? ಸ್ವಲ್ಪವಾದರೂ ಹೋಲಿಕೆ ಇದೆಯಾ?**

**ಉತ್ತರ :–** ನಾವು ದೇವರು ಭೂಮಿಮೇಲಕ್ಕೆ ಬಂದು ಹುಟ್ಟುತ್ತಾನಾ? ಇಲ್ಲವಾ ಎನ್ನುವ ವಿಷಯವನ್ನು ಮೊದಲುಮಾಡಿದ್ದೇವೆ. ಆದರೆ ಅದಕ್ಕೆ ಅನುಬಂಧ ವಾಗಿಯೇ 'ಧನಿಕನು, ವಜ್ರ' ಕಥೆಯನ್ನು ಹೇಳಿಕೊಂಡಿದ್ದೇವೆ. ನಾವು ಮೊದಲುಮಾಡಿದ ವಿಷಯಕ್ಕು 'ಧನಿಕನು, ವಜ್ರ' ಎನ್ನುವ ವಿಷಯಕ್ಕು ಬಹಳ ಹೋಲಿಕೆಗಳಿವೆ. ಇಲ್ಲಿಯವರೆಗೂ ಹೇಳಿಕೊಂಡ ಜ್ಞಾನಮಾರ್ಗವೊಂದರ ಹೋಲಿಕೆ ಯಾವ ವಿಧವಾಗಿ ಇದೆಯೋ ಈಗ ನೋಡೋಣ. **'ದೇವರು ಯಾರಿಗೂ ಕಾಣಿಸುವುದಿಲ್ಲ, ಯಾರೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ. ತನ್ನ ಜ್ಞಾನವನ್ನು ನೇರವಾಗಿ ಯಾರೊಂದಿಗೂ ಹೇಳುವುದಿಲ್ಲ'** ಎನ್ನುವ ವಿಷಯವನ್ನು ಅಂತಿಮ ದೈವಗ್ರಂಥದಲ್ಲಿ **42ನೇ ಸೂರಾ, 51ನೇ** ಆಯತ್‌ನಲ್ಲಿ ಹೇಳಿಲಾಗಿದೆ. ಅಷ್ಟೇಅಲ್ಲದೆ **"ದೇವರ ಜ್ಞಾನ ದೇವರಿಗೆ ಹೊರತು ಯಾವ ಮಾನವನಿಗೂ ತಿಳಿಯದೆಂದು, ಇತರರಿಗ್ಯಾರಿಗು ತಿಳಿದಿಲ್ಲವೆಂದು"** ಅದೇ ಅಂತಿಮ ದೈವಗ್ರಂಥದಲ್ಲಿ 3ನೇ ಸೂರಾ, 7ನೇ ಆಯತ್‌ನಲ್ಲಿ ಹೇಳಲಾಗಿದೆ. ಈಗ ಅದೇ ವಿಷಯವನ್ನೇ ಮೇಲೆ ಹೇಳಿದ ಧನಿಕನು, ವಜ್ರದ ಕಥೆಯಲ್ಲಿ ಹೇಳಿಕೊಂಡಿದ್ದೇವೆ. ಆ ಕಥೆಗೆ ದೈವಗ್ರಂಥದಲ್ಲಿ ವಾಕ್ಯಗಳಿಗೆ ಪೂರ್ತಿ ಹೋಲಿಕೆ ಇದೆಯೆಂದು ಹೇಳಬಹುದು.

ಸೃಷ್ಟಿಕರ್ತನಾದ ದೇವರು ಈ ಕಥೆಯಲ್ಲಿ ಧನಿಕನಾಗಿ ಹೇಳಲ್ಪಟ್ಟಿದ್ದಾನೆ. ದೇವರ ಜ್ಞಾನವನ್ನು ವಜ್ರವಾಗಿ ಹೇಳುವುದಾಗಿದೆ. ದೇವರ ಜ್ಞಾನ ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿಯದೆಂದು ಹೇಳಿದಂತೆ ಧನಿಕನ ಹತ್ತಿರವಿರುವ ವಜ್ರ ಧನಿಕನಿಗೆ ಹೊರತು ಯಾರಿಗೂ ತಿಳಿದಿಲ್ಲ. ದೇವರ ಹತ್ತಿರವಿರುವ ಜ್ಞಾನ ಯಾರಿಗೂ ತಿಳಿಯದಂತೆ ಧನಿಕನ ಹತ್ತಿರವಿರುವ ವಜ್ರವನ್ನು ಯಾರಿಗೂ ತಿಳಿದಿಲ್ಲವೆಂದು ಸಮಾನ ಹೋಲಿಕೆಯಿಂದ ಹೇಳುವುದಾಗಿದೆ. ದೇವರ ಹತ್ತಿರವಿರುವ ಜ್ಞಾನವನ್ನು ದೇವರ ಪ್ರತಿನಿಧಿ ಮೂಲಕ ಭೂಮಿಮೇಲೆ ಮನುಷ್ಯರಿಗೆ ದೇವರು ತಿಳಿಸಿದಂತೆ, ಧನಿಕನಾಗಿರುವವನೇ ತನ್ನ ವಜ್ರವನ್ನು ತಾನು ಕಳಿಸಿದ ಬಿಕ್ಷಕನಿಂದ ತೋರಿಸಿದ್ದಾನೆ. ಆದರೂ ತಾನು ಯಾರನ್ನು ಕಳಿಸಿರುವುದು ಹೊರಗೆ ಹೇಳದಿರುವುದರಿಂದ ಬಿಕ್ಷಕನು ಯಾರಾಗಿರುವುದು? ಆತನ ಹತ್ತಿರ ವಜ್ರ ಹೇಗೆ ಇರುವುದು? ನಮಗೆ ತಿಳಿಯದಂತೆ ಹೋಗಿದೆ. ದೇವರ ಪ್ರತಿನಿಧಿಯಾದ ಭಗವಂತನು ತಿಳಿಸಿದ ಜ್ಞಾನವನ್ನು ತಿಳಿಯಲ್ಪಟ್ಟು ದೇವರನ್ನು ಗೌರವಿಸಿದಂತೆ, ಬಿಕ್ಷಕನು ತೋರಿಸಿದ ವಜ್ರವನ್ನು ನೋಡಿ ಧನಿಕನನ್ನು ಗೌರವಿಸುವುದು ನಡೆದಿದೆಯೆಂದು ಹೇಳಿಕೊಂಡಿದ್ದೇವೆ. ಕಾಲಕ್ರಮೇಣ ಧರ್ಮಗಳು ಅಧರ್ಮ ಗಳಾಗಿ ಬದಲಾವಣೆಯಾಗಿ ಭಗವಂತನನ್ನು ಕುರಿತಾಗಲಿ, ದೇವರನ್ನು ಕುರಿತಾಗಲಿ ತಿಳಿದೇಹೋದಂತೆ ಸ್ವಲ್ಪ ಕಾಲಕ್ಕೆ ವಜ್ರವನ್ನು, ಬಿಕ್ಷಕನನ್ನು, ಧನಿಕನನ್ನು ಮರತೆಹೋಗಿದ್ದಾರೆಂದು ಹೇಳಿಕೊಂಡಿದ್ದೇವೆ.

ಅಂತಹ ಸಮಯದಲ್ಲಿ ದೇವರು ತಿರುಗಿ ಭಗವಂತನಾಗಿ ಬಂದು ಮೊದಲು ಹೇಳಿದ ಜ್ಞಾನಕ್ಕಿಂತ ಹೆಚ್ಚಾಗಿ ಹೇಳಿಹೋಗುತ್ತಾನೆ. ಆದ್ದರಿಂದ ಬಿಕ್ಷಕನು ಪುನಃ ಬಂದು ವಜ್ರ ತೋರಿಸುತ್ತಾನೆಂದು, ಮೊದಲು ಬಂದಾಗ ಹತ್ತುಜನರಿಗೆ ಮಾತ್ರ ತೋರಿಸಿದ್ದರೆ, ಈ ಸಲ ಸಾವಿರಜನಕ್ಕೆ ವಜ್ರವನ್ನು ತೋರಿಸುತ್ತಾನೆಂದು ಹೇಳಿದಂತೆ, ದೇವರು ಎರಡನೆ ಬರುವಿಕೆಯಲ್ಲಿ ಬಂದಾಗ ಮೊದಲು ಹೇಳಿದ ಜ್ಞಾನಕ್ಕಿಂತ ಹೆಚ್ಚಾಗಿ ಬೋಧಿಸುತ್ತಾನೆಂದು, ಈ ಜ್ಞಾನವೆಲ್ಲ ದೇವರ ಜ್ಞಾನವೇಯೆಂದು ಸಾರಿ ಹೇಳುತ್ತಾನೆಂದು ಹೇಳುತ್ತಿದ್ದೇವೆ. ಹಾಗೆಯೇ

ಬಿಕ್ಷಕನಾಗಿ ಬಂದವನು ಹೆಚ್ಚಿನ ಜನರಿಗೆ ವಜ್ರವನ್ನು ತೋರಿಸುವುದಲ್ಲದೆ ಈ ವಜ್ರ ಧನಿಕನದೇ ಎಂದು ಸಾರಿ ಹೇಳುತ್ತಾನೆ. ದೇವರು ದೇವರಾಗಿ ಅಲ್ಲದೆ ಭಗವಂತನೆನ್ನುವ ಮನುಷ್ಯನಾಗಿ ಬಂದು ಜ್ಞಾನವನ್ನು ಭೂಮಿಮೇಲೆ ಹೇಳಿಹೋಗುತ್ತಾನೆನ್ನುವುದಕ್ಕೆ ಸಮಾನ ಹೋಲಿಕೆಯಾಗಿ 'ಧನಿಕನು, ಬಿಕ್ಷುಕನು' ಕಥೆಯನ್ನು ಹೇಳುವುದಾಗಿದೆ.

| | | |
|---|---|---|
| **ಧನಿಕನು** | **–** | **ದೇವರು** |
| **ಬಿಕ್ಷುಕನು** | **–** | **ಭಗವಂತನು** |
| **ವಜ್ರ** | **–** | **ದೈವಜ್ಞಾನ** |

**೩೦೦ ಕಿಲೋಮೀಟರ್‌ಗಳ ದೂರ ಪ್ರಾಂತ್ಯದ – ಭೂಮಿಮೇಲೆ ಅಜ್ಞಾನವಿರುವಸ್ಥಳ**

**ವಜ್ರವನ್ನು ನೋಡಿದ ಮನುಷ್ಯರು – ಜ್ಞಾನವನ್ನು ಕೇಳಿದ ಮನುಷ್ಯರು**

**ವಜ್ರವನ್ನು ಮರೆತುಹೋಗುವುದು – ಧರ್ಮಗಳು ಅಧರ್ಮಗಳಾಗಿ ಬದಲಾಗುವುದು**

**ಎರಡನೆ ಸಲ ಬಿಕ್ಷಕನು ಬರುವುದು – ದೇವರು ಭಗವಂತನಾಗಿ ಎರಡನೆಸಲ ಬರುವುದು.**

**ಪ್ರಶ್ನೆ :– ಈದಿನ ಹಿಂದೂಗಳಲ್ಲಿ 'ಈಶ್ವರ ಲಿಂಗ'ಗಳನ್ನು ಇಟ್ಟು ಶ್ರದ್ಧೆಯಿಂದ ಪೂಜಿಸುವವರಿದ್ದಾರೆ. ಹಾಗೆಯೇ ಹೊಸಹೊಸ 'ಚರ್ಚಿಗಳನ್ನು' ಕ್ರೈಸ್ತರು ನಿರ್ಮಿಸುತ್ತಾ, ಬೈಬಲ್ ಬೋಧನೆಗಳನ್ನು ಹೇಳುತ್ತಾ ಪ್ರಾರ್ಥನೆಗಳನ್ನು ಮಾಡುತ್ತಿದ್ದಾರೆ. ಮುಸ್ಲಿಮ್‌ರು ಮಜೀದ್‌ಗಳೆನ್ನುವ ಪ್ರಾರ್ಥನಾ ಮಂದಿರಗಳನ್ನು ಕಟ್ಟಿಸಿಕೊಂಡು ನಮಾಜ್‌ಗಳು ಮಾಡುತ್ತಿದ್ದಾರೆ. ಯಾರ ಮತದಲ್ಲಿ ಅವರು ಬಹಳ ಶ್ರದ್ಧೆಯಿಂದ ದೇವರ ಮೇಲೆ ಭಕ್ತಿಹೊಂದಿ ಮುಂದಕ್ಕೆ ಹೋಗುತ್ತಿದ್ದಾರೆ. ಪೂರ್ವಕ್ಕಿಂತ ಈಗಲೇ ದೇವರ ಮೇಲೆ ಹೆಚ್ಚಾಗಿ ನಂಬಿಕೆ ಉಂಟಾಗಿ ಪೂರ್ತಿ ವಿಶ್ವಾಸದಿಂದ ಎಲ್ಲರೂ ಅಲ್ಲದಿದ್ದರೂ ಕೆಲವರಾದರೂ ಬಹಳ ನಿಷ್ಠೆಯಿಂದ ಇದ್ದಾರೆ. ಹಿಂದೂಗಳಲ್ಲಿ ಎಷ್ಟೋಜನ ಸ್ವಾಮೀಜಿಗಳು, ಎಷ್ಟೋ ಕಠೋರವಾದ ನಿಷ್ಠೆಗಳನ್ನು ಆಚರಿಸಿ ಉಳಿದವರಿಗೆ ಭಕ್ತಿಯನ್ನು ಸಾರುತ್ತಿದ್ದಾರೆ. ಇನ್ನೂ ಕ್ರೈಸ್ತರಲ್ಲಿ ಫಾದರ್ರ್ಸು, ಪಾಸ್ಟರ್ರ್ಸು**

ತಮ್ಮ ಗ್ರಂಥಗಳಲ್ಲಿನ ವಾಕ್ಯಗಳನ್ನು ಪಠಿಸುತ್ತಾ ಉಳಿದವರನ್ನು ಕೂಡಾ ಯೇಸುನಲ್ಲಿ ವಿಶ್ವಾಸ ಇಡುವಂತೆ ಮಾಡುತ್ತಿದ್ದಾರೆ. ಅವರ ಬೋಧನೆಗಳನ್ನು ಅನುಸರಿಸಿ ಬಹಳಜನ ಹಿಂದೂಗಳು ಕ್ರೈಸ್ತರಾಗಿ ಬದಲಾವಣೆಯಾಗಿದ್ದಾರೆ. ಉಳಿದ ಮುಸ್ಲಿಮ್‌ರನ್ನು ಕುರಿತು ಹೇಳಿದರೆ ಮೊದಲು ಹುಟ್ಟಿದ ಹಿಂದೂ, ಕ್ರೈಸ್ತರಿಗಿಂತ ದೇವರ ಮೇಲೆ ವಿಶ್ವಾಸ ಹೆಚ್ಚಾಗಿ ಹೊಂದಿದ್ದಾರೆ. ಹಿಂದೂಗಳು ಹಬ್ಬದ ದಿನಗಳಲ್ಲಿ 'ಗುಡಿಗಳಿಗೆ' ಹೋಗಿ ದೇವರುಗಳನ್ನು ಪೂಜಿಸಿದರೇ, ಕ್ರೈಸ್ತರು ವಾರಕ್ಕೆ ಒಂದುಸಲ ಅದೂ ರಜಾ ದಿನವಾದ ಭಾನುವಾರ ಮಾತ್ರ ಚರ್ಚಿಗಳಿಗೆ ಹೋಗಿ ಪ್ರಾರ್ಥನೆ ಮಾಡಿ ಬರುವುದು ಮಾಡುತ್ತಿದ್ದಾರೆ.

ಮುಸ್ಲಿಮ್‌ರ ವಿಷಯಕ್ಕೆ ಬಂದರೆ ಅವರು ಪ್ರತಿ ದಿನ 'ಮಜೀದ್'ಗೆ ಹೋಗಿ 'ನಮಾಜ್' ಎನ್ನುವ ದೈವಪ್ರಾರ್ಥನೆ ಮಾಡುವುದನ್ನು ನೋಡುತ್ತಲೇ ಇದ್ದೇವೆ. ಪ್ರತಿ ದಿನ ಒಂದುಸಲ ಪ್ರಾರ್ಥನೆ ಮಾಡುವವರು ಕೆಲವರಿರುವಾಗ, ಪ್ರತಿ ದಿನ ಐದು ಹೊತ್ತು ನಮಾಜ್ ಮಾಡುವವರು ಮತ್ತೆ ಕೆಲವರಿದ್ದಾರೆ. ಹೆಂಗಸರು ನಮಾಜ್ ಸಮಯಕ್ಕೆ ಮನೆಯಲ್ಲಿಯೇ ಪ್ರಾರ್ಥನೆ ಮಾಡುತ್ತಿದ್ದಾರೆ. ಈ ವಿಧವಾಗಿ ಹಿಂದೂಗಳಿಗಿಂತ ಕ್ರೈಸ್ತರು, ಕ್ರೈಸ್ತರಿಗಿಂತ ಮುಸ್ಲಿಮ್‌ರು ದೇವರ ಆರಾಧನೆಯಲ್ಲಿ ಮುಂದಿದ್ದಾರೆ. ಹೀಗೆ ಇಂದು ಪೂರ್ವಕ್ಕಿಂತ ಭಕ್ತಿ ಹೆಚ್ಚಾಗಿ ಇರುವಂತೆ ತಿಳಿಯುತ್ತಿರು ವಾಗ, ಈಗ ನೀವು ಬಂದು "ಇದು ದೇವರ ಬರುವಿಕೆಗೆ ಸಮಯವಲ್ಲವೇ!" ಎಂದು ಕೇಳಿದರೆ ನಿಮ್ಮ ಮಾತು ಹಾಸ್ಯಾಸ್ಪದವಾಗಿ ಇದೆ. ಒಂದು ಮತ ಮತ್ತೊಂದು ಮತ ಪೋಟೀಬಿದ್ದು ಭಕ್ತಿಮಾರ್ಗದಲ್ಲಿ ಮುಂದಕ್ಕೆ ಹೋಗುವ ಸಮಯದಲ್ಲಿ ನೀವು ಈ ಮಾತನ್ನು ಹೇಳುವುದು ಸಮಂಜಸವೇನಾ? ಎಂದು ಪ್ರಶ್ನಿಸುತ್ತಿದ್ದೇವೆ.

**ಉತ್ತರ :–** ಕೃಷ್ಣನು 'ಭಗವದ್ಗೀತೆ'ಯನ್ನು ಹೇಳಿದಾಗ **'ಈದಿನ ವಿಜೃಂಭಿಸಿದ ಅಧರ್ಮಗಳನ್ನು ರೂಪ ಬದಲಾಯಿಸಿ, ಪುನಃ ಧರ್ಮಗಳನ್ನು ಪ್ರತಿಷ್ಠಿಸುವುದಕ್ಕೆ ಬಂದಿದ್ದೇನೆಂದು"** ಹೇಳುವುದು ನಡೆದಿದೆ. ಆದರೆ ಆದಿನ ಯಾರಾದರೂ ಆ ಮಾತು ನಿಜವೆಂದು ಅಂದುಕೊಂಡಿದ್ದಾರಾ? ಇಲ್ಲ. ಆ ದಿನಗಳಲ್ಲಿ ವ್ಯಾಸನು ಬರೆದ ವೇದಗಳು, ಪುರಾಣಗಳು, ಉಪನಿಷತ್ತುಗಳು ಪ್ರಜೆಗಳಲ್ಲಿ ಪೂರ್ತಿಯಾಗಿ

ವ್ಯಾಪಿಸಿರುವುದರಿಂದ ಆದಿನ ಪ್ರಜೆಗಳು ವೇದಗಳನ್ನು ಹೆಚ್ಚಾಗಿ ಓದುತ್ತಿದ್ದರು, ಯಜ್ಞಗಳನ್ನು ಅಧಿಕವಾಗಿ ಮಾಡುತ್ತಿದ್ದರು. ದಾನಗಳನ್ನು ಮಾಡುವುದು ಒಳ್ಳೆಯದಾಗಿ ತಿಳಿಯುತ್ತಿದ್ದರು. ಇನ್ನೂ ಭಕ್ತಿ ಹೆಚ್ಚಾಗಿರುವವರು ಮೂಗು ಮುಚ್ಚಿಕೊಂಡು, ಗೋಚಿ ಇಟ್ಟುಕೊಂಡು ತಪಸ್ಸುಗಳು ಮಾಡುತ್ತಿದ್ದರು. ಪ್ರಜೆಗಳು ಎಲ್ಲವುಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಆ ದಿನಗಳು ಅತ್ಯಂತ ಭಕ್ತಿ ಪ್ರವೃತ್ತಿಗಳಿರುವ ದಿನಗಳಾಗಿ ಎಲ್ಲರೂ ತಿಳಿಯುತ್ತಿದ್ದರು. ಸನ್ಯಾಸತ್ವ ಸ್ವೀಕರಿಸಿ, ಕಾಷಾಯ ವಸ್ತ್ರಗಳು ಧರಿಸಿದವರು ಹೆಚ್ಚಾಗಿ ಇರುತ್ತಿದ್ದರು. ಅಂತಹ ದಿನಗಳಲ್ಲಿ ಶ್ರೀಕೃಷ್ಣನು ಬಂದು ಈದಿನ ಧರ್ಮಗಳೆಲ್ಲವೂ ನಾಶವಾಗಿ ಹೋಗಿವೆಯೆಂದು, 'ಧರ್ಮ ಸಂಸ್ಥಾಪನೆ' ಮಾಡುತ್ತೇನೆಂದು ಹೇಳುವುದು ಕೆಲವರಿಗೆ ಆಶ್ಚರ್ಯವಾಗಿಯೇ ಕಾಣಿಸಿದೆ. ಒಳ್ಳೆಯವರನ್ನು ಅಭಿವೃದ್ಧಿಮಾಡಿ ದುಷ್ಟರ ಸಂಖ್ಯೆಯನ್ನು ಕಡಿಮೆ ಮಾಡುತ್ತೇನೆಂದು **"ಪರಿತ್ರಾಣಾಯಸಾಧೂನಾಂ ವಿನಾಶಾಯಚ ದುಷ್ಕೃತಾಮ್"** ಎನ್ನುವ ಮಾತಿಗೆ ಆಗ ದುಷ್ಟರು ಯಾರೆಂದು ಆಲೋಚಿಸಿದ್ದಾರೆ. ಎಲ್ಲಾ ಒಳ್ಳೆಯವರಾಗಿ ಭಕ್ತಿವರರಾಗಿ ಕಾಣಿಸುವ ಆ ದಿನಗಳಲ್ಲಿ ದುಷ್ಟರಾಗಿ ಯಾರೂ ಕಾಣಿಸಲಿಲ್ಲ. ಆದರೆ ಯಾರನ್ನು ಉದ್ದೇಶಿಸಿ ಕೃಷ್ಣನು ಆ ಮಾತುಗಳನ್ನು ಹೇಳಿದ್ದಾನೊ ಬಹಳಜನರಿಗೆ ಅರ್ಥವಾಗಲಿಲ್ಲ. ಆದರೆ ಆತನು ಹೇಳಿದ ಭಗವದ್ಗೀತೆ ಜ್ಞಾನ ಯಾವ ದುಷ್ಟರನ್ನು ಬದಲಾವಣೆ ಮಾಡಿದೆಯೊ ಕೃಷ್ಣನು ಹೋದ ನಂತರ ಕೂಡಾ ಅರ್ಥ ಆಗಲಿಲ್ಲವೆಂದೇ ಹೇಳಬಹುದು. ಈಗ ನಾವು **"ದುಷ್ಟತ್ವ"** ಎಂದರೆ ಏನೋ ಅರ್ಥ ಮಾಡಿಕೊಂಡರೆ, ಸನ್ಮಾರ್ಗ ಎಂದರೆ ಏನೊ ಸುಲಭವಾಗಿ ಅರ್ಥವಾಗುತ್ತದೆ.

ದೇವರು ಭಗವಂತನಾಗಿ ನರ ಶರೀರವನ್ನು ಧರಿಸಿ ಬಂದು ಆತನು ತನ್ನ ಜ್ಞಾನದಿಂದಲೇ ದುಷ್ಟರನ್ನು ಬದಲಾಯಿಸುತ್ತೇನೆಂದು ತಿಳಿಸುತ್ತಾ **"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ"** ಎಂದು ಹೇಳಿದ್ದಾನೆ. ಇದರಿಂದ ಧರ್ಮಸಂಸ್ಥಾಪನೆ ಮಾಡಿ ದುಷ್ಟರನ್ನು ಇಲ್ಲದಂತೆ ಮಾಡುತ್ತೇನೆಂದು ಹೇಳಿದಂತಾಗಿದೆ. ಧರ್ಮಸಂಸ್ಥಾಪನೆ ಎಂದರೆ ದೈವಜ್ಞಾನವನ್ನು ತಿಳಿಸುವುದೇ

ಯೆಂದು ಅರ್ಥ. ದೈವಜ್ಞಾನವನ್ನು ತಿಳಿಸುವುದು ಭಗವಂತನ ಮೊದಲ ಕೆಲಸವಾಗಿದ್ದು, ದುಷ್ಟರನ್ನು ಕಡಿಮೆಮಾಡುವುದು ಎರಡನೆ ಕೆಲಸವಾಗಿ ತಿಳಿಯುತ್ತಿದೆ. ಕೃಷ್ಣಭಗವಾನ್ ಆ ದಿನಗಳಲ್ಲಿ ತಾನು ಭಗವಂತನೆಂದು ಯಾರಿಗೂ ತಿಳಿಯದಂತಿದ್ದು, ತನ್ನ ವಯಸ್ಸು 90 ವರ್ಷಗಳು ಕಳೆದ ನಂತರ ಯುದ್ಧ ಸಮಯದಲ್ಲಿ ಯಾರೂ ಕೇಳದಂತೆ, ಒಬ್ಬ ಅರ್ಜುನನೊಂದಿಗೆ ತನ್ನ ಜ್ಞಾನವನ್ನು ಮಾತುಗಳ ರೂಪವಾಗಿ ಐದಾರು ನಿಮಿಷಗಳಲ್ಲಿ ತಿಳಿಸಿದ್ದಾನೆ. ಹಾಗೆ ಒಬ್ಬನಿಗೇ ಯಾರಿಗೂ ತಿಳಿಯದಂತೆ ಅರ್ಜುನನಿಗೆ ಮಾತ್ರ ಹೇಳಿದರೇ ಅರ್ಜುನನಿಗೆ ಅದು ಪೂರ್ತಿಯಾಗಿ ಅರ್ಥವಾಗದೆ ತಪ್ಪದೆ ವ್ಯಾಸನ ಹತ್ತಿರಕ್ಕೆ ಹೋಗಿ ತಾನು ಹೇಳಿರುವುದೆಲ್ಲ ವ್ಯಾಸನಿಗೆ ಹೇಳುತ್ತಾನೆನ್ನುವ ಉದ್ದೇಶದಿಂದಲೇ, ಮುಂದಾ ಲೋಚನೆಯಿಂದಲೇ ಒಂದು ಯೋಜನೆಯ ಪ್ರಕಾರ ಕೃಷ್ಣನು ಅರ್ಜುನನಿಗೆ ಜ್ಞಾನವನ್ನು ಹೇಳಿದ್ದಾನೆ. ಅರ್ಜುನನಿಗೆ ಅಂದಿಗೇ ಸ್ವಲ್ಪ ಅರ್ಥವಾದರೂ, ನಂತರ ಎಲ್ಲಾ ಸಂಶಯಗಳಮಯವಾಗಿ ಹೋಗಿದೆ. ಅರ್ಜುನನ ಮನಸ್ಸು ಎಷ್ಟೋ ಪ್ರಶ್ನೆಗಳನ್ನು ಜ್ಞಾಪಕಕ್ಕೆ ತಂದಿದೆ. ಆಗ ಅರ್ಜುನನು ಆ ಕಾಲದಲ್ಲಿ ಜ್ಞಾನ ಎಲ್ಲಾ ತಿಳಿದವನೆನಿಸಿಕೊಂಡ ವ್ಯಾಸನ ಹತ್ತಿರಕ್ಕೆ ಹೋಗಿದ್ದಾನೆ. ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು ಬರೆದ ವ್ಯಾಸನು ಯಾವುದಕ್ಕಾದರೂ ಸಮಾಧಾನ ಕೊಡಬಲ್ಲನೆನ್ನುವ ಉದ್ದೇಶದಿಂದ ಅರ್ಜುನನು ವ್ಯಾಸನ ಹತ್ತಿರಕ್ಕೆ ಹೋಗಿದ್ದಾನೆ. ಆ ವಿಧವಾಗಿ ಕೃಷ್ಣನ ಯೋಜನೆ ನೆರವೇರಿದೆ.

ಕೃಷ್ಣನ ಯೋಜನೆಯ ಪ್ರಕಾರವೇ ಅರ್ಜುನನು ವ್ಯಾಸನ ಹತ್ತಿರಕ್ಕೆ ಹೋಗಿ ಕೃಷ್ಣನು ಹೇಳಿದ ಜ್ಞಾನವೆಲ್ಲವನ್ನು ರವೆಯಷ್ಟು ಕೂಡಾ ಬಿಡದಂತೆ ಹೇಳಿದ್ದಾನೆ. ಕೊನೆಗೆ ಇದೆಲ್ಲವೂ ವಾಸ್ತವವೇನಾ? ಎನ್ನುವ ಸಂಶಯವನ್ನು ತಿಳಿಸಿದ್ದಾನೆ. ಅಲ್ಲಿಯವರೆಗೂ ಕೃಷ್ಣನು ಮೊದಲು ಅಂದುಕೊಂಡಿರುವುದು ಅಂದುಕೊಂಡಂತೆ ನಡೆದಿದೆ. ಆದರೆ ಇಲ್ಲಿ ನಮಗೆ ಬಂದಿರುವ ಪ್ರಶ್ನೆ ಏನೆಂದರೆ ಕೃಷ್ಣನು ಅಷ್ಟು ಯೋಜನೆಯಿಂದ ಏಕೆ ಅರ್ಜುನನನ್ನು ವ್ಯಾಸನ ಹತ್ತಿರಕ್ಕೆ ಕಳಿಸಿದ್ದಾನೆ. ಕೃಷ್ಣನಿಗೆ ಅರ್ಜುನನನ್ನು ವ್ಯಾಸನ ಹತ್ತಿರಕ್ಕೆ ಕಳಿಸುವುದರಲ್ಲಿ ಅಡಗಿರುವ

ಉದ್ದೇಶವೇನು? ಎನ್ನುವುದೇ ಪ್ರಶ್ನೆ. ಈ ಪ್ರಶ್ನೆಗೆ ವಾಸ್ತವವಾಗಿ ಅಂದಿನ ಕೃಷ್ಣನೇ ಸಮಾಧಾನ ಹೇಳಬೇಕಾಗಿದೆ. ಆದರೆ ಆತನು ನಮಗೆ ಹತ್ತಿರದಲ್ಲಿ ಇಲ್ಲ. ನಮಗೆ ಹತ್ತಿರದಲ್ಲಿರುವುದು ಆತನಲ್ಲಿನ ಆತ್ಮ ಮಾತ್ರವೇ. ಆದಿನ ಕೃಷ್ಣ ಶರೀರದಲ್ಲಿ ನಡೆದಿರುವ ಕೆಲಸಗಳೆಲ್ಲವನ್ನು ಆತ್ಮವೇ ಮಾಡಿಸಿರುತ್ತದೆ, ಆದ್ದರಿಂದ ಕೃಷ್ಣನು ಇಲ್ಲದಿದ್ದರೂ ಕೃಷ್ಣನಲ್ಲಿರುವ ಆತ್ಮ ನಮ್ಮಲ್ಲಿ ಕೂಡಾ ಇರುವುದರಿಂದ, ನನ್ನಲ್ಲಿ ಇರುವುದು ಕೂಡಾ ಅದೇ ಆತ್ಮವೇ ಆಗಿರುವುದರಿಂದ, ಅಂದಿನ ಕೃಷ್ಣನ ಭಾವನೆಗಳನ್ನು ನನ್ನ ಆತ್ಮದ ಮೂಲಕ ತಿಳಿದುಕೊಳ್ಳುತ್ತೇನೆಂದು ಹೇಳುತ್ತಿದ್ದೇನೆ. ಆದರೆ ಈ ನನ್ನ ಮಾತಿನಲ್ಲಿ ಕೂಡಾ ಕೆಲವರಿಗೆ ಸಂದಿಗ್ಧತೆ ಏರ್ಪಡುತ್ತದೆ. ಎಲ್ಲರಲ್ಲಿರುವ ಆತ್ಮ ಎನ್ನುತ್ತಾನೆ! ಅದೇ ನನ್ನ ಆತ್ಮ ಎನ್ನುತ್ತಾನೆ! ಎಲ್ಲರಲ್ಲಿರುವ ಆತ್ಮ ನಿಮ್ಮಲ್ಲಿ ಕೂಡಾ ಇದೆ, ನಿಮಗೆ ಉತ್ತರವನ್ನು ಹೇಳಲ್ಪಟ್ಟರೆ ಅದೇನೂ ನಮ್ಮೊಂದಿಗೆ ಕೂಡಾ ಹೇಳಬಹುದಲ್ಲವೆ. ನಮ್ಮೊಂದಿಗೆ ಹೇಳದಂತೆ ನಿನ್ನೊಬ್ಬನೊಂದಿಗೆ ಹೇಳುವುದರಿಂದ ನಾವು ನಿಮಗೆ ಆತ್ಮವೇ ಹೇಳಿದೆಯೆಂದು ಹೇಗೆ ನಂಬಬೇಕು? ನೀವೇ ಸ್ವತಃವಾಗಿ ಕಲ್ಪಿಸಿ ಹೇಳಿದ್ದೀರೆಂದು ನಾವು ಅಂದುಕೊಳ್ಳಬಹುದಲ್ಲವೆ ಎಂದು ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗೆ ಇದೆ.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದ ಹದಿನೇಳನೆ ಶ್ಲೋಕದಲ್ಲಿ ಹೀಗೆ ಇದೆ. **"ಮತ್ತಃ ಸ್ಮೃತಿರ್ ಜ್ಞಾನ ಮಪೋಹನಂಚ" "ನನ್ನಿಂದಲೇ ಉಂಟಾಗುವ ಸ್ಮೃತಿ, ಜ್ಞಾನ, ಊಹೆ"** ಎಂದು ಹೇಳುವುದಾಗಿದೆ. ಇದನ್ನನುಸರಿಸಿ ನನ್ನಿಂದ ಬರುವ ಜ್ಞಾಪಕವಾಗಲಿ, ಜ್ಞಾನವಾಗಲಿ, ಊಹೆಗಳಾಗಲಿ ಎಲ್ಲಾ ಆತ್ಮವೇ ಉಂಟುಮಾಡುತ್ತಿದೆಯೆಂದು ತಿಳಿಯುತ್ತಿದೆ. ಹಾಗಿರುವಾಗ ನಾನು ಪ್ರತ್ಯೇಕವಾಗಿ ಕಲ್ಪಿಸಿ ಮಾತನಾಡುವುದು ಏನೂ ಇಲ್ಲ. ಇದೇ ವಿಷಯವನ್ನೇ ದ್ವಿತಿಯ ದೈವಗ್ರಂಥವಾದ ಇಂಜೀಲ್ (ಬೈಬಲ್) ಗ್ರಂಥದಲ್ಲಿ ಮತ್ತಾಯ ಸುವಾರ್ತೆ 10ನೇ ಅಧ್ಯಾಯದಲ್ಲಿ 20ನೇ ವಚನದಲ್ಲಿ ಹೀಗೆ ಇದೆ ನೋಡಿರಿ. **(ಮ. 10–20) "ನಿಮ್ಮ ತಂದೆ ಆತ್ಮ**

**ನಿಮ್ಮಲ್ಲಿದ್ದು ಮಾತನಾಡುತ್ತಿದ್ದಾನೇ ಹೊರತು ಮಾತನಾಡುವವನು ನೀವಲ್ಲ"** ಎಂದು ಇದೆ. "ಪ್ರತಿ ಮಾತನ್ನು ನಿಮ್ಮಲ್ಲಿರುವ ಆತ್ಮವೇ ಮಾತನಾಡುತ್ತಿದೆಯೆಂದು ನೀವಲ್ಲ" ಎಂದು ಅಷ್ಟು ದೃಢವಾಗಿ ದೈವಗ್ರಂಥದಲ್ಲಿ ಹೇಳಿದಾಗ ನಂತರ ಕೂಡಾ ನಾನು ಕಲ್ಪಿಸಿ ಮಾತನಾಡುತ್ತೇನೆಂದು ನೀವು ಹೇಗೆ ಅಂದುಕೊಳ್ಳುತ್ತಿದ್ದೀರ? ನಾನೇ ಮಾತನಾಡುತ್ತಿದ್ದೇನೆಂದು ನಾನು ಹೇಗೆ ಅಂದುಕೊಳ್ಳಬೇಕು? 'ನಾನಾಗಲಿ, ನೀವಾಗಲಿ ಏನೂ ಮಾತನಾಡಲಿಲ್ಲ, ಯಾವುದೂ ಮಾತನಾಡಲಿಲ್ಲ' ಎನ್ನುವುದೇ ವಾಸ್ತವ. ಇಲ್ಲಿ ನಿನ್ನ ಪ್ರಶ್ನೆಗೆ ಆತ್ಮ ಉತ್ತರ ಹೇಳಿದರೆ, ನಮಗೂ ಸಹ ನಮ್ಮ ಪ್ರಶ್ನೆಗಳಿಗೆ ಆತ್ಮ ಉತ್ತರಗಳು ಹೇಳಬೇಕಲ್ಲವೆ! ನಮಗೆ ಯಾವಮಾತ್ರವೂ ಹೇಳದ ಆತ್ಮ ನಿನಗೊಬ್ಬನಿಗೆ ಹೇಗೆ ಹೇಳುತ್ತದೆಂದು ನಾವು ಕೇಳುತ್ತಿದ್ದೇವೆಂದು ಕೆಲವರು ಕೇಳಬಹುದು. ಇದು ಕೇಳಬೇಕಾದ ಪ್ರಶ್ನೆಯೇ. ಆದರೆ ಅವುಗಳಿಗೆ ಮೊದಲೇ ಉತ್ತರ ಭಗವದ್ಗೀತೆಯಲ್ಲಿಯೂ, ಬೈಬಲ್ ಗ್ರಂಥದಲ್ಲಿಯೂ ಹೇಳಲ್ಪಟ್ಟಿದೆ. ಈ ಪ್ರಶ್ನೆಗೆ ಅಂತಿಮ ದೈವಗ್ರಂಥದಲ್ಲಿ ಕೂಡಾ ಹೀಗೆ ಹೇಳಲ್ಪಟ್ಟಿದೆ ನೋಡಿರಿ.

ಸೂರಾ ಅಲ್ ಬಖರ 2, ಆಯತ್ 186 ರಲ್ಲಿ ಹೀಗೆ ಇದೆ. **(2–186) "ನನ್ನ ದಾಸಿಗಳು ನನ್ನನ್ನು ಕುರಿತು ನಿನ್ನನ್ನು ಕೇಳಿದರೆ ನಾನು ಅವರಿಗೆ ಅತಿಸಮೀಪದಲ್ಲಿಯೇ ಇದ್ದೇನೆ. ಕರೆಯುವವನು ನನ್ನನ್ನು ಕರೆದಾಗ ನಾನು ಆತನ ಕರೆಯನ್ನು ಕೇಳಿ ಉತ್ತರಕೊಡುತ್ತೇನೆ. ಆದ್ದರಿಂದ ಅವರು ಸರಿಯಾದ ಮಾರ್ಗ ಹೊಂದುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇಕು. ಇನ್ನೂ ನನ್ನಲ್ಲಿ ವಿಶ್ವಾಸ ಹೊಂದಿರಬೇಕು ಎಂದು ಹೇಳು."** ಇಲ್ಲಿ ಹೇಳಿದ ವಾಕ್ಯದಲ್ಲಿ ಬಹಳ ವಿವರವಾಗಿ ಯಾರು ಕೇಳಿದರೂ ಆತನ ಉತ್ತರ ಹೇಳುತ್ತಾನೆಂದು ಇದೆ. ದೇವರ ಭಕ್ತರು ದೇವರನ್ನು ಕುರಿತು ತಿಳಿದುಕೊಳ್ಳಬೇಕೆಂದು ಕೇಳಿದರೆ **"ದೇವರು ಆತ್ಮರೂಪದಲ್ಲಿ ಅತ್ಯಂತ ಸಮೀಪವಾಗಿ ಇದ್ದಾನೆ"** ಎಂದು ಹೇಳಬಹುದು. ಅಷ್ಟೇಅಲ್ಲದೆ "ಯಾರು ನನ್ನನ್ನು ಕರೆದರೂ ಅವನ ಕರೆಯನ್ನು ಕೇಳಿ ಅವನಿಗೆ ಉತ್ತರಕೊಡುತ್ತೇನೆ" ಎಂದು ಹೇಳುವುದರಿಂದ ಯಾರ ಕರೆಯನ್ನಾದರೂ ಅಂದರೆ! 'ಯಾರು ಕೇಳಿದರೂ ಅವರ ಅಭ್ಯರ್ಥನೆಯನ್ನು ಆತನು ಕೇಳಿ ಅದಕ್ಕೆ ಸರಿಹೋಗುವ ಉತ್ತರ ಕೊಡುತ್ತೇನೆಂದು' ಹೇಳುವುದರಿಂದ, ನಾನು ಒಬ್ಬನೇ ಅಲ್ಲ ನೀವು

ಕೂಡಾ ಆತನನ್ನು ಕೇಳಬಹುದು. ನೀವು ಕೇಳಲಿಲ್ಲ ನಿಮಗೆ ಉತ್ತರ ಹೇಳಲಿಲ್ಲ. ನಾನು ಕೇಳಿದ್ದೇನೆ ನನಗೆ ಉತ್ತರ ಹೇಳಿದ್ದಾನೆ. ನಾವು ಕೇಳಿದ್ದೇವೆ ನಮಗೆ ಹೇಳಲಿಲ್ಲವೇ? ಎಂದು ಕೂಡಾ ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! "ಅವರು ಸರಿಯಾದ ಮಾರ್ಗವನ್ನು ಪಡೆಯುವುದಕ್ಕೆ ನನ್ನ ಉತ್ತರವನ್ನು ಅನುಸರಿಸಬೇಕು" ಎಂದು ವಾಕ್ಯದಲ್ಲಿ ಇರುವುದರಿಂದ ಯಾರು ಕೇಳಿದರೂ ಕೇಳುವುದು ಪ್ರಪಂಚ ಸಂಬಂಧವಲ್ಲದೆ ದೈವ ಸಂಬಂಧ ವಾದುದಾಗಿ, ಸರಿಯಾದ ಜ್ಞಾನಮಾರ್ಗವನ್ನು ಅನುಸರಿಸುವುದಾಗಿ ಇರಬೇಕು. ಕೇಳಿದ ಪ್ರಶ್ನೆ ದೈವಿಕವಾದುದಾದರೆ ಅದಕ್ಕೆ ಆತನು ತಪ್ಪದೆ ಉತ್ತರ ಹೇಳುತ್ತಾನೆ. ಆದರೆ ಕೆಲವರು ನಾವು ದೈವಿಕವಾದ ಪ್ರಶ್ನೆ ಕೇಳಿದ್ದೇವೆ, ಆದರೂ ಒಳಗಿರುವ ಆತನು, ನಮಗೆ ಸಮೀಪವಾಗಿ ಇದ್ದೇನೆಂದು ಹೇಳಿದ ಆತನು ಯಾವ ಉತ್ತರ ಹೇಳಲಿಲ್ಲ, ಇದಕ್ಕೆ ನೀವೇನು ಹೇಳುತ್ತೀರ? ನಮಗೆ ಹೇಳಿರುವವನು ನಿಮಗೆ ಹೇಗೆ ಹೇಳಿದ್ದಾನೆ? ಎಂದು ಕೇಳಬಹುದು.

ಹೀಗೆ ಕೇಳುತ್ತೀರೆಂದು ಆತನು ತನ್ನ ವಾಕ್ಯದಲ್ಲಿ ಮೊದಲೇ ಹೀಗೆ ಹೇಳಿದ್ದಾನೆ. **'ನನ್ನ ದಾಸರು ನನ್ನನ್ನು ಕುರಿತು ಕೇಳಿದರೆ'** ಎಂದು ಹೇಳುವುದರಿಂದ ಆತನ ದಾಸರು ಕೇಳಿದರೇನೆ ತಾನು ಉತ್ತರ ಹೇಳುತ್ತಾನೆಂದು, ಉಳಿದವರು ಯಾರು ತನ್ನ ದಾಸರಾಗಿ ನಟಿಸಿದರೂ ಅವರ ಮಾತುಗಳು ಕೇಳುವುದಿಲ್ಲವೆಂದು, ಅವರಿಗೆ ಉತ್ತರ ಹೇಳುವುದಿಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಮೊದಲಿನಿಂದ ತನ್ನ ದಾಸರಾಗಿರುವವರ ಮಾತುಗಳನ್ನು ಮಾತ್ರವೇ ಆತನು ಕೇಳುತ್ತಾನೆಂದು ತಿಳಿಯುತ್ತಿದೆ. ನಾನು ನನ್ನ ಜೀವನದ ಪ್ರಾರಂಭದಿಂದ ಆತನ ದಾಸನಾಗಿದ್ದೇನೆ. ಆದ್ದರಿಂದ ನಾನು ಕೇಳುವ ಪ್ರತಿ ಪ್ರಶ್ನೆಗು ಉತ್ತರ ದೊರೆಯುತ್ತಿದೆ. ಪ್ರಪಂಚ ಸಂಬಂಧವಾದ ಪ್ರಶ್ನೆ ಕೇಳಿದರೆ ಅದಕ್ಕೆ ನನಗೆ ಕೂಡಾ ಉತ್ತರವಿರುವುದಿಲ್ಲ. ನಾನು ದ್ವಾಪರಯುಗದ ಕೊನೆಯಲ್ಲಿ ಹೇಳಿದ ಭಗವದ್ಗೀತೆಗೆ ಸಂಬಂಧಿಸಿದ ಪ್ರಶ್ನೆಯನ್ನು ಕೇಳಿದ್ದೇನೆ. ಆದುದರಿಂದ ನನಗೆ ಉತ್ತರ ಸಿಕ್ಕಿದೆ. ಆದರೆ ಆ ಉತ್ತರ ಹೇಗಿದೆಯೋ ಕೆಳಗೆ ನೋಡೋಣ.

ನನಗೆ ದೊರೆತಿರುವ ಉತ್ತರ ಅತ್ಯಂತ ಕಠಿಯಾದ ಸತ್ಯವಾಗಿ ಇದೆ. ನನ್ನ ಆತ್ಮ ಹೇಳಿರುವುದು ಪೂರ್ತಿ ಸತ್ಯವೇ. ಆದ್ದರಿಂದ ನಾನು ಪೂರ್ತಿಯಾಗಿ ನಂಬಿದ್ದೇನೆ. ಇತರರ್ಯಾರೂ ನಂಬುವುದಿಲ್ಲವೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಧರ್ಮಸಂಸ್ಥಾಪನೆ ನಿಮಿತ್ತ ಕೃಷ್ಣನು ಭಗವದ್ಗೀತೆಯನ್ನು ಅತ್ಯಂತ ರಹಸ್ಯವಾಗಿ ಅರ್ಜುನನಿಗೆ ಹೇಳಿದ್ದಾನೆ. ಅಲ್ಲಿಗೆ ಧರ್ಮಸಂಸ್ಥಾಪನೆ ನಡೆದಂತೆ. ಆದರೆ ದುಷ್ಟರನ್ನು ಇಲ್ಲದಂತೆ ಮಾಡಬೇಕಾದ ಎರಡನೆ ಕೆಲಸ ಕೂಡಾ ಆತನ ಮೇಲೆ ಇರುವುದರಿಂದ ಆಗಿನಕಾಲದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ದುಷ್ಟತ್ವ ಹೊಂದಿದ ವ್ಯಕ್ತಿಯನ್ನು ಕುರಿತು, ಆತನಿಂದಲೇ ಉಳಿದವರೆಲ್ಲರೂ ದುಷ್ಟರಾಗಿ ಬದಲಾ ಗುತ್ತಿದ್ದಾರೆಂದು ತಿಳಿದ ಕೃಷ್ಣನು ದುಷ್ಟ ವಿನಾಶಕ್ಕಾಗಿ ಸಿದ್ಧವಾಗಿದ್ದಾನೆ. ಆದರೆ ದುಷ್ಟನಾಶ ಕತ್ತಿಗಳಿಂದ ಮಾಡುವುದಲ್ಲ. ತನ್ನ ಬೋಧನೆಯಿಂದ ಅವರ ದುಷ್ಟ ಭಾವನೆಯನ್ನು ಬದಲಾಯಿಸುವುದೇ **"ವಿನಾಶಾಯಚ ದುಷ್ಕೃತಾಮ್"** ಎನ್ನುವ ಮಾತಿಗೆ ಸರಿಹೋಗುತ್ತದೆ. ಆದ್ದರಿಂದ ಕೃಷ್ಣನು ಅರ್ಜುನನ ಮೂಲಕ ತನ್ನ ಬೋಧನೆಯನ್ನು ಮೊದಲು ವ್ಯಾಸನ ಹತ್ತಿರಕ್ಕೆ ಸೇರುವಂತೆ ಮಾಡಿದ್ದಾನೆ. ಜ್ಞಾನದ ಮೇಲೆ ಶ್ರದ್ಧೆಯಿಲ್ಲದವನಿಗೆ ಜ್ಞಾನವನ್ನು ಹೇಳಿ ಯೋಜನೆಯ ಪ್ರಕಾರ ತನ್ನ ಜ್ಞಾನವನ್ನು ವ್ಯಾಸನ ಹತ್ತಿರಕ್ಕೆ ಸೇರಿಸಿದ್ದಾನೆ.

ಆದರೆ ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ಧರ್ಮಗಳ ಬೋಧನೆಯಿಂದ ದುಷ್ಟರನ್ನು ಒಳ್ಳೆಯವರನ್ನಾಗಿ ಬದಲಾವಣೆ ಮಾಡಿ ನಂತರ ಅವರಲ್ಲಿ ದುಷ್ಟ ಭಾವನೆಗಳನ್ನು ಇಲ್ಲದಂತೆ ಮಾಡುವುದಕ್ಕೆ ದುಷ್ಟರ ಹತ್ತಿರಕ್ಕೆ ತನ್ನ ಜ್ಞಾನವನ್ನು ಸೇರಿಸಬೇಕೇ ಹೊರತು ಭಗವಂತನೆಂದು, ವ್ಯಾಸಭಗವಾನ್ ಎಂದು ಕರೆಯಲ್ಪಡುತ್ತಿರುವ, ಚತುರ್‌ಮುಖ ಬ್ರಹ್ಮಗೆ ಸಮಾನ ವಾಗಿ ಹೇಳಲ್ಪಡುತ್ತಿರುವ ವ್ಯಾಸನ ಹತ್ತಿರಕ್ಕೆ ಅರ್ಜುನನನ್ನು ಯೋಜನೆಯ ಪ್ರಕಾರ ಏಕೆ ಕಳಿಸಿದ್ದಾನೆ? ಎಂದು ಸಂಶಯ ಬಾರದೆ ಇರುವುದಿಲ್ಲ. ಅಂದಿಗೆ ವ್ಯಾಸನು ನಾಲ್ಕುವೇದಗಳನ್ನು, ಅಷ್ಟಾದಶ ಪುರಾಣಗಳು, ಉಪನಿಷತ್ತುಗಳನ್ನು ಬರೆದು ಪ್ರಜೆಗಳಿಗೆ ಪರಿಚಯ ಮಾಡಿದ್ದಾನೆ ಮತ್ತು 'ವ್ಯಾಸೋನಾರಾಯಣ' ಎಂದು ಕರೆಯಲ್ಪಡುತ್ತಿರುವ ವ್ಯಾಸನ ಹತ್ತಿರಕ್ಕೆ ಕೃಷ್ಣನು ಯೋಜನೆಯ ಪ್ರಕಾರ

ಏಕೆ ಕಳಿಸಿದ್ದಾನೋ ನನಗೆ ತಿಳಿದರೂ ನಾನು ಹೇಳುವುದಿಲ್ಲ. ಮುಂದೆ ಮುಂದೆ ಭಗವಂತನಾದ ಕೃಷ್ಣನ ಯೋಜನೆ ಏನೆನ್ನುವುದು ತಿಳಿಯಬಲ್ಲದು.

ಜ್ಞಾನದ ಮೇಲೆ ಶ್ರದ್ಧೆಯಿಲ್ಲದ ಅರ್ಜುನನು, ಕೃಷ್ಣನು ಹೇಳಿದ ಜ್ಞಾನವನ್ನು ಕೇಳಿದರೂ, ಅದನ್ನು ಜೀರ್ಣಿಸಿಕೊಳ್ಳದೆ ವ್ಯಾಸನ ಹತ್ತಿರಕ್ಕೆ ಹೋಗಿ ಕಕ್ಕಿದಂತೆ ಎಲ್ಲವನ್ನು ಹೇಳಿದ್ದಾನೆ. ಕೃಷ್ಣನು ಅರ್ಜುನನಿಗೆ ಹೇಳಿದ ಬೋಧನೆಯನ್ನು ಕೇಳಿ ವ್ಯಾಸನು ನಿಶ್ಚೇಷ್ಟನಾಗಿದ್ದಾನೆ. ತನ್ನಲ್ಲಿರುವ ಭಾವನೆಗಳಿಗು ಕೃಷ್ಣನು ಹೇಳಿದ ಭಾವನೆಗಳಿಗು ಎಷ್ಟೋ ವ್ಯತ್ಯಾಸವಿರುವಂತೆ ಗ್ರಹಿಸಿದ್ದಾನೆ. ಕೆಲವು ದಿನಗಳು ದೀರ್ಘವಾಗಿ ಆಲೋಚಿಸಿ ಕೊನೆಗೆ ತನ್ನಲ್ಲಿ ಮೊದಲಿರುವ ವ್ಯಾಸನು ಇರಬಾರದೆಂದು, ಹೊಸ ವ್ಯಾಸನನಾಗಿ ಬದಲಾಗಬೇಕೆಂದು ಅಂದುಕೊಂಡಿದ್ದಾನೆ. ವೇದಗಳ, ಪುರಾಣಗಳ ರಚನೆಗಳಿಂದ ತನಗೆ ಅಮಿತವಾದ ಪಾಪ ಬಂದಿರುತ್ತ ದೆಂದು ತಿಳಿದ ವ್ಯಾಸನು ಒಳೊಳಗೆ ಕೃಂಗಿಹೋಗಿದ್ದಾನೆ. ಅಗ್ನಿ ತಾಕಿದ ಸ್ಫಟಿಕದಂತೆ ಬದಲಾಗಿಹೋಗಿದ್ದಾನೆ. ಬದಲಾದ ವ್ಯಾಸನಾಗಿ ತಾನು ಕೇಳಿದ ಬೋಧನೆಯನ್ನು ಗ್ರಂಥರೂಪವಾಗಿ ಮಾಡಬೇಕೆಂದುಕೊಂಡಿದ್ದಾನೆ. ಕೃಷ್ಣನು ಐದಾರು ನಿಮಿಷಗಳು ಹೇಳಿದ ಬೋಧನೆಯನ್ನು ಅರ್ಜುನನು ಅರ್ಧಗಂಟೆ ವ್ಯವಧಿಯಲ್ಲಿ ಮಾತುಗಳಲ್ಲಿ ಹೇಳಿದಾಗ ಕೇಳಿದ ವ್ಯಾಸನು, ಏಳುನೂರು (700) ಸಂಸ್ಕೃತ ಶ್ಲೋಕಗಳಾಗಿ ಬರೆಯುವುದು ನಡೆದಿದೆ. ಹಾಗೆ ಒಬ್ಬ ವ್ಯಾಸನನ್ನು ಬದಲಾಯಿಸುವುದರಿಂದ, ವ್ಯಾಸನು ಬರೆದ ಭಗವದ್ಗೀತೆಯಿಂದ ಲೋಕದಲ್ಲಿನ ದುಷ್ಟರೆಲ್ಲರೂ ಬದಲಾ ಗುತ್ತಾರೆಂದು ಕೃಷ್ಣನು ಅಂದುಕೊಂಡಿರಬಹುದು. ನಂತರ ಕಾಲದಲ್ಲಿ ತನ್ನ ಜ್ಞಾನ ಭಗವದ್ಗೀತೆ ರೂಪದಲ್ಲಿ ಎಷ್ಟೋ ಜನರನ್ನು ಬದಲಾಯಿಸಬಲ್ಲದೆಂದು ಯೋಜನೆಯ ಪ್ರಕಾರ ವ್ಯಾಸನನ್ನು ಬದಲಾಯಿಸಿ ಆತನ ಮೂಲಕ ಭಗವದ್ಗೀತೆ ಯನ್ನು ಬರೆಸಿದರೂ, ಭಗವದ್ಗೀತಾ ಜ್ಞಾನ ಕಲಿಯುಗದಲ್ಲಿ ಗ್ರಂಥರೂಪ ವಾಗಿದ್ದರೂ, ಮಾಯಾ ಪ್ರಭಾವದಿಂದ ಭೂಮಿಮೇಲೆ ಕೆಲವರು ಬದಲಾದರೂ ಬಹಳಜನ ದುಷ್ಟರಾಗಿಯೇ ಉಳಿದುಹೋಗಿದ್ದಾರೆ. ಅದನ್ನು ಸರಿದಿದ್ದುವುದಕ್ಕೆ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"**ಎಂದು ಕೇಳಬಹುದು.

**ಪ್ರಶ್ನೆ :– ನೀವು ಹೇಳಿದ ವಿಷಯವನ್ನು ಚೆನ್ನಾಗಿ ಗ್ರಹಿಸಿದರೇ ಕೃಷ್ಣನ ದೃಷ್ಟಿಯಲ್ಲಿ ವ್ಯಾಸನೇ ಮೊದಲ ದುಷ್ಟನಾಗಿರುವಂತೆ ತಿಳಿಯುತ್ತಿದೆ. ಅದಕ್ಕೆ ವ್ಯಾಸನನ್ನು ಮೊದಲು ಬದಲಾಯಿಸಬೇಕೆಂದು ಅರ್ಜುನನನ್ನು ಮೊದಲು ವ್ಯಾಸನ ಹತ್ತಿರಕ್ಕೆ ಕಳಿಸಿದಂತೆ ನಮಗರ್ಥವಾಗುತ್ತಿದೆ. ನಾವು ಅಂದುಕೊಂಡಿರುವುದು ನಿಜವೇ ಅಲ್ಲವೆ!**

**ಉತ್ತರ :–** ಹೇಳಿರುವುದನ್ನನುಸರಿಸಿ ನೀವು ಹೇಗಾದರೂ ಅಂದುಕೊಂದೊಳ್ಳ ಬಹುದು. ವ್ಯಾಸನನ್ನು ಕುರಿತು ನಾನು ಏನೂ ಹೇಳಲಿಲ್ಲ. ಆದರೆ ವ್ಯಾಸನು ಅರ್ಜುನನು ಹೇಳಿದ ಬೋಧನೆಯನ್ನು ಕೇಳಿ ತಾನು ಅಧರ್ಮಗಳನ್ನು ಬೋಧಿಸಿರುವವನಾಗಿ ಲೆಕ್ಕಿಸಿಕೊಂಡಿದ್ದಾನೆ. ಕೃಷ್ಣನು ಹೇಳಿದ 'ದುಷ್ಟನಾಶನ' ನನ್ನಿಂದಲೇ ಮೊದಲಾಗಬೇಕೆಂದುಕೊಂಡಿದ್ದಾನೆ. ಆದ್ದರಿಂದ ತಾನು ಬದಲಾಗಿ ಮೊದಲು ತಾನು ಬರೆದ ವೇದಗಳಿಗೆ ತಾನೇ ವಿರುದ್ಧವಾಗಿ ಬರೆದಿದ್ದಾನೆ. 'ವೇದಗಳನ್ನು' ಗುಣಮಯಗಳಾದ 'ಮಾಯೆ'ಯಾಗಿ ಹೋಲಿಸಿ ಹೇಳಿದ್ದಾನೆ. ಮತ್ತೊಂದುಕಡೆ ತಾನು ಮೊದಲು ತಿಳಿಸಿದ **'ವೇದಗಳಿಂದ, ಯಜ್ಞಗಳಿಂದ, ದಾನಗಳಿಂದ ತಪಸ್ಸುಗಳಿಂದ ದೇವರು ತಿಳಿಯುವುದಿಲ್ಲವೆಂದು'** ಕೃಷ್ಣನು ಹೇಳಿದಂತೆ ಸಂಕೋಚಿಸದೆ ಬರೆದಿದ್ದಾನೆ. ಅದೇ ವಿಧಾನದ ಪ್ರಕಾರ ಕೃಷ್ಣನು ಹೇಳಿದಂತೆ ವೇದಗಳನ್ನು **'ಮಾಯೆ'** ಎಂದು ವರ್ಣಿಸಿದ್ದಾನೆ. ಈ ವಿಧವಾಗಿ ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಭಗವದ್ಗೀತೆಯನ್ನು ಚಂದೋಬದ್ದವಾಗಿ ಬರೆಯುವುದು ನಡೆದಿದೆ. ವ್ಯಾಸನು ಭಗವದ್ಗೀತೆಯನ್ನು ಬರೆದು ಮರಣಿಸಿದ ನಂತರ ಕೆಲವರು ಸ್ವಾರ್ಥವರರು ತಮಗೆ ಅನುಕೂಲವಾದ ಶ್ಲೋಕಗಳನ್ನು ಭಗವದ್ಗೀತೆಯಲ್ಲಿ ಬೆರೆಸಿ ಭಗವದ್ಗೀತೆಯನ್ನು ಸ್ವಲ್ಪ ಕಲುಷಿತ ಮಾಡಿದ್ದಾರೆ.

ಭಗವದ್ಗೀತೆಯಲ್ಲಿ ಅರ್ಜುನ ವಿಷಾದಯೋಗ ಭಗವಂತನು ಹೇಳಿದ ಬೋಧನೆಗೆ ಸಂಬಂಧವಿಲ್ಲ. ಆದುದರಿಂದ **ಭಗವದ್ಗೀತೆಯಲ್ಲಿರುವ 700 ಶ್ಲೋಕಗಳಲ್ಲಿ ಅರ್ಜುನ ವಿಷಾದ ಯೋಗದಲ್ಲಿ 46 ಶ್ಲೋಕಗಳು ತೆಗೆದುಹಾಕಿದರೆ 654 ಶ್ಲೋಕಗಳಿರುತ್ತವೆ. ಆದರೇ 54 ಶ್ಲೋಕಗಳು ಎಲ್ಲಾ ಅಧ್ಯಾಯಗಳಲ್ಲಿ ಕಲ್ಪಿತ ಶ್ಲೋಕಗಳು ಇವೆ. ಅವುಗಳ ವಿವರ ಸಾಂಖ್ಯಯೋಗದಲ್ಲಿ 7, ಕರ್ಮಯೋಗದಲ್ಲಿ**

**7, ಜ್ಞಾನಯೋಗದಲ್ಲಿ 9, ಆತ್ಮಸಂಯಮ ಯೋಗದಲ್ಲಿ 1, ವಿಶ್ವರೂಪ ಸಂದರ್ಶನ ಯೋಗದಲ್ಲಿ 10, ಶ್ರದ್ಧಾತ್ರಯ ವಿಭಾಗಯೋಗದಲ್ಲಿ 6, ಮೋಕ್ಷ ಸನ್ಯಾಸ ಯೋಗದಲ್ಲಿ 14 ಒಟ್ಟಾರೆ 54 ಕಲ್ಪಿತ ಶ್ಲೋಕಗಳನ್ನು ತಗೆದುಹಾಕಿದಾಗ ಒಟ್ಟು 600 ಶ್ಲೋಕಗಳು ಮಾತ್ರವೇ ಭಗವದ್ಗೀತೆಯೆಂದು ಹೇಳಬಹುದು. 700 ಶ್ಲೋಕಗಳ ಭಗವದ್ಗೀತೆಯಲ್ಲಿ 46 ಅರ್ಜುನ ವಿಷಾದಯೋಗ ಭಗವದ್ಗೀತೆ ಹೆಸರಿಗೆ ಸಂಬಂಧ ಇಲ್ಲದ್ದು. ನಂತರ 54 ಕಲ್ಪಿತ ಶ್ಲೋಕಗಳು ಒಟ್ಟು 100 ಶ್ಲೋಕಗಳು ಅಧಿಕವಾಗಿ ಕಲ್ಪಿಸಲ್ಪಟ್ಟಿವೆ. ಅದರಲ್ಲಿ 54 ಶ್ಲೋಕಗಳನ್ನು ಮಾತ್ರ ವ್ಯಾಸನು ಮರಣಿಸಿದ ನಂತರ ಸೇರಿಸಲ್ಪಟ್ಟಿವೆ.**

ಐದು ಸಾವಿರ ವರ್ಷಗಳ ಹಿಂದೆ ಹೇಳಿದ ಭಗವದ್ಗೀತೆ ಇಂದು ಸ್ವಲ್ಪ ಕಲುಷಿತವಾಗಿದೆ. ಆ ಕಲುಷಿತವನ್ನು ತೆಗೆದುಹಾಕಿ ಅಸಲಾದ ಜ್ಞಾನವಿದು ಎಂದು ಹೇಳುವುದಕ್ಕೆ ಆದಿನ ಹೇಳಿದ ದೇವರೇ ಇಳಿದು ಬರಬೇಕಾಗಿದೆ. ಅಷ್ಟೇಅಲ್ಲದೆ ಒಂದುಸಲ ಹೇಳಿದ ಬೋಧನೆಯಿಂದ ತಿಮಿಂಗಿಲದಂತಹ ಒಬ್ಬ ವ್ಯಾಸನನ್ನು ಬದಲಾಯಿಸಿದರು ಕೃಷ್ಣನು ಹೇಳಿದ ಭಗವದ್ಗೀತೆ 54 ಶ್ಲೋಕಗಳು ಕಲುಷಿತವಾಗಿ ಹೋಗುವುದಲ್ಲದೆ ಶ್ಲೋಕಗಳಿಗೆ ವಾಸ್ತವ ಭಾವನೆಗಳು ಇಲ್ಲದಂತೆಹೋಗಿ, ಯಾರ ಇಷ್ಟಾನುಸಾರ ಅವರು ಹೇಳಿಕೊಳ್ಳುವುದಾಗಿದೆ. ಇಂತಹ ಸಮಯವನ್ನು ನೋಡಿದರೆ ಯಾರಿಗಾದರೂ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"** ಎನಿಸುತ್ತದೆ. **"ಅಧರ್ಮಗಳು ಅಭಿವೃದ್ಧಿಯಾದಾಗ ಯಾವ ಯುಗದಲ್ಲಾದರೂ ನಾನು ಬಂದು ತಿರುಗಿ ಧರ್ಮಗಳನ್ನು ಪ್ರತಿಷ್ಠಿಸಿ ಅಧರ್ಮಗಳನ್ನು ಇಲ್ಲದಂತೆ ಮಾಡುತ್ತೇನೆಂದು"** ದೇವರು ಹೇಳಿದ್ದಾನೆ. ಆದರೆ ಪ್ರಸ್ತುತ ಕಾಲದಲ್ಲಿ ದೇವರ ಧರ್ಮಗಳು ಯಾವುವೂ ಯಾರಿಗೂ ತಿಳಿಯದಂತೆ ಹೋಗಿವೆ. ಮುಖ್ಯವಾಗಿ ಸ್ವಾಮೀಜಿಗಳಾಗಿದ್ದು ಪ್ರಜೆಗಳಿಗೆ ದೈವಜ್ಞಾನ ಬೋಧನೆಗಳು ಹೇಳುವವರಿಗೆ ಧರ್ಮಗಳು ಯಾವುವೂ ತಿಳಿಯದೆ ಹೋಗಿವೆ. ಸ್ವಾಮೀಜಿಗಳಾಗಿ ಇರುವವರೇ ತಾವು ಆಚರಿಸುವವೇ ಧರ್ಮಗಳೆಂದುಕೊಂಡು ಅಧರ್ಮಗಳನ್ನು ಆಚರಿಸುತ್ತಿದ್ದಾರೆ. ಧರ್ಮಗಳ ಪ್ರಸ್ತಾವನೆ ಸ್ವಾಮೀಜಿಗಳಾಗಿ ಇರುವವರ ಹತ್ತಿರವೇ ಇಲ್ಲದಿರುವಾಗ ಸಾಮಾನ್ಯ ಪ್ರಜೆಗಳಿಗೆ ಧರ್ಮಗಳ ವಿಷಯ ಹೇಗೆ ತಿಳಿಯ

ಬಲ್ಲದು? ದೇವರು ಸೃಷ್ಟಿ ಆದಿಯಲ್ಲಿ ಹೇಳಿದ ಬೋಧನೆಯಲ್ಲಿಯೇ ಧರ್ಮ ಗಳನ್ನು, ಅಧರ್ಮಗಳನ್ನು ತಿಳಿಸುವುದಾಗಿದೆ. ಅದೇ ಜ್ಞಾನವನ್ನೇ ಕೃಷ್ಣನು ಹೇಳಿದಾಗ, ಅದನ್ನೇ ಭಗವದ್ಗೀತೆಯಾಗಿ ಬರೆಯುವುದಾಗಿದೆ. ಭಗವದ್ಗೀತೆಯಲ್ಲಿ 'ಧರ್ಮಸಂಸ್ಥಾಪನೆ ಮಾಡುವುದಕ್ಕೆ ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಬರುತ್ತೇನೆಂದು' ಹೇಳಿದಾಗಲೇ ಧರ್ಮಗಳನ್ನು, ಅಧರ್ಮಗಳನ್ನು ಹೇಳಿದ್ದಾನೆ. ಅವು ಇಂದಿಗೂ ಭಗವದ್ಗೀತಾ ಗ್ರಂಥದಲ್ಲಿ ಶ್ಲೋಕಗಳ ರೂಪದಲ್ಲಿ ಬರೆಯಲ್ಪಟ್ಟಿದ್ದರೂ ಧರ್ಮಗಳನ್ನು ಯಾರೂ ಗುರುತಿಸುತ್ತಿಲ್ಲ. ಅಧರ್ಮಗಳನ್ನೇ ಧರ್ಮಗಳಾಗಿ ಗುರುತಿಸಿ ಅವುಗಳನ್ನೇ ಎಲ್ಲರೂ ಆಚರಿಸುತ್ತಿದ್ದಾರೆ.

ಭಗವದ್ಗೀತೆಯನ್ನು ಬೋಧನೆಯಾಗಿ ಹೇಳುವ ಸ್ವಾಮೀಜಿಗಳೇ ಇವು ಧರ್ಮಗಳು ಇವು ಅಧರ್ಮಗಳೆಂದು ಭಗವದ್ಗೀತೆಯಲ್ಲಿ ಹೇಳಿದವುಗಳನ್ನು ಕುರಿತು ಹೇಳದಂತೆ, ಅಧರ್ಮಗಳಾಗಿ ಹೇಳಲಾದ ಅವುಗಳನ್ನೇ ತಾವು ಆಚರಿಸುತ್ತಾ, ಇತರರನ್ನು ಕೂಡಾ ಆಚರಿಸುವಂತೆ ಮಾಡುತ್ತಿದ್ದಾರೆ. ಅಧರ್ಮಗಳಾದ ನಾಲ್ಕು ಕ್ರಿಯೆಗಳ ಮೂಲಕ ದೇವರು ತಿಳಿಯುವುದಕ್ಕೆ ಶಕ್ಯ ಆಗುವುದಿಲ್ಲವೆಂದು ಭಗವದ್ಗೀತೆಯಲ್ಲಿಯೇ ಕೃಷ್ಣನು ಹೇಳಿದ್ದಾನೆ. ಹಾಗೆಯೇ ಧರ್ಮಗಳಾದ ಮೂರು ಕ್ರಿಯೆಗಳ ಮೂಲಕ ದೇವರು ತಿಳಿಯಲ್ಪಡುತ್ತಾನೆಂದು ಹೇಳಿದ್ದಾನೆ. ಆದರೆ ಆ ವಿಷಯವನ್ನು ಬೋಧಕರಾದ ಸ್ವಾಮೀಜಿಗಳು ಸ್ವಲ್ಪವೂ ಹೊರಗೆ ಹೇಳುತ್ತಿಲ್ಲ. ಮೊದಲು ಅವರಿಗೇ ಧರ್ಮಗಳು ಅಧರ್ಮಗಳ ವಿಷಯಗಳಲ್ಲಿ ಅವಗಾಹನೆ ಇಲ್ಲದಂತೆ ಹೋಗಿದೆ, ಅವರು ಕುರುಡರಾಗಿ ಧರ್ಮಗಳನ್ನು ಅಧರ್ಮಗಳಾಗಿ, ಅಧರ್ಮಗಳನ್ನು ಧರ್ಮಗಳಾಗಿ ಅಂದು ಕೊಳ್ಳುವುದು ನಡೆಯುತ್ತಿದೆ. ಆದುದರಿಂದ **ಅಧರ್ಮಗಳ ಸ್ಥಾನದಲ್ಲಿರುವ ಯಜ್ಞಗಳ ಆಚರಣೆ, ವೇದಗಳಪಠನೆ, ದಾನ ಮಾಡುವುದು, ತಪಸ್ಸುಗಳು ಮಾಡುವುದು ಎನ್ನುವ ಕಾರ್ಯಗಳನ್ನು ಆಚರಿಸುತ್ತಿದ್ದಾರೆ. ಧರ್ಮ ವಿಷಯವನ್ನು ವಿವರವಾಗಿ ಕರ್ಮಯೋಗ ಆಚರಣೆ, ಬ್ರಹ್ಮಯೋಗ ಸ್ತಬ್ದತೆ, ಭಕ್ತಿಯೋಗ ಆಚರಣೆ** ಹೇಳಿರುವಾಗ ಅವುಗಳನ್ನು ಕುರಿತು ಯಾವ ಮಾತ್ರವೂ ತಿಳಿಯದಂತಿದ್ದಾರೆ.

ಕರ್ಮಯೋಗಕ್ಕೆ ಹೇಳಿದ ಶ್ಲೋಕಗಳಿಗೆ ತಪ್ಪು ಅರ್ಥವನ್ನು ಹೇಳುತ್ತಿದ್ದಾರೆ. ಹಾಗೆ ಬ್ರಹ್ಮಯೋಗವನ್ನು ಹೇಳಿದ ಶ್ಲೋಕಗಳ ವಿವರದಲ್ಲಿ ಅಶಾಸ್ತ್ರೀಯವಾಗಿ ಹೇಳುತ್ತಿದ್ದಾರೆ. ಇನ್ನು ಭಕ್ತಿಯೋಗ ವಿಷಯದೊಳಗೆ ಬಂದರೆ ಅದೇನೊ ತಿಳಿಯದಂತೆ ಹೋಗಿದೆ.

ಈ ವಿಧವಾಗಿ ಈಗಿನ ಸಮಾಜಕ್ಕೆ ಧರ್ಮಾಧರ್ಮಗಳು ತಿಳಿಯದೆ ಹೋಗಿರುವುದರಿಂದ ಹಿರಿಯರಾದ ಸ್ವಾಮೀಜಿಗಳು ಹೇಳಿದವುಗಳನ್ನೇ ಕೇಳಿ ಆಚರಿಸುತ್ತಿದ್ದಾರೆ. ಸ್ವಾಮೀಜಿಗಳು ಪ್ರತಿ ಭಕ್ತಿ ವಿಷಯದಲ್ಲಿಯೂ ಮನುಷ್ಯರಿಂದ ಯಜ್ಞಗಳು ಮಾಡಿಸುತ್ತಿದ್ದಾರೆ. ಪ್ರತಿ ಶುಭಕಾರ್ಯದಲ್ಲಿಯು ಯಜ್ಞಾಚರಣೆ ತಪ್ಪದೆ ಮಾಡುವುದು ತಪ್ಪಲಿಲ್ಲ. ಹಾಗೆ ಯಜ್ಞಗಳು ಮಾಡುವಾಗ ಅದಕ್ಕೆ ಅನುಬಂಧವಾಗಿ ವೇದಮಂತ್ರಗಳನ್ನು ಓದುತ್ತಾ ವೇದಪಠನೆ ಮಾಡುತ್ತಿದ್ದಾರೆ. ಹಾಗೆ ಒಂದು ಶುಭಕಾರ್ಯವನ್ನು ಮಾಡಿದ ನಂತರ ಅಲ್ಲಿ ಯಜ್ಞದಲ್ಲಿ ಪಾಲ್ಗೊಂಡವರೆಲ್ಲರಿಗೂ ದಾನಗಳು ಮಾಡುವುದು ಕೂಡಾ ತಪ್ಪದೆ ಹೇಳುತ್ತಿದ್ದಾರೆ. ಈ ವಿಧವಾಗಿ ಹಿಂದೂಗಳಾದವರು ಎಲ್ಲರೂ ಮೂರು ಅಧರ್ಮಗಳನ್ನು ತಪ್ಪದೆ ಆಚರಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಪ್ರತಿ ದಿನವಾಗಲಿ, ಆಗಾಗಾಗಲಿ 'ಧ್ಯಾನ' ಎನ್ನುವ ಹೆಸರಿನಿಂದ ಅಥವಾ 'ಮೆಡಿಟೇಷನ್' ಎನ್ನುವ ಹೆಸರಿನಿಂದ ಯಾವುದೋ ಒಂದು ಮಂತ್ರವನ್ನೋ, ಒಂದು ಹೆಸರನ್ನೋ, ಒಂದು ಆಕಾರವನ್ನೋ ಧ್ಯಾನಿಸುವುದು ಮಾಡುತ್ತಿದ್ದಾರೆ. ಧ್ಯಾನದಲ್ಲಿ ಒಂದನ್ನು ತಪಿಸುವುದು ಹೊರತು ಇನ್ನೊಂದು ಏನು ಇರುವುದಿಲ್ಲ. ಆದುದರಿಂದ ಅಂತಹ ಧ್ಯಾನ ಪ್ರಕ್ರಿಯೆಯನ್ನು ತಪಸ್ಸೆಂದು ಹೇಳಬಹುದು. ಹಿಂದೂಗಳಲ್ಲಿ ಬಹಳಜನ ಮೂರು ಅಧರ್ಮಗಳನ್ನು ಆಚರಿಸುತ್ತಿರುವಾಗ ಕೆಲವರು ತಪಸ್ಸು ಕೂಡಾ ಮಾಡುತ್ತಾ ಒಟ್ಟು ನಾಲ್ಕು ಅಧರ್ಮಗಳನ್ನು ಆಚರಿಸುತ್ತಿದ್ದಾರೆ. 'ಅಧರ್ಮ ಆಚರಣೆ ಇರಬಾರದು' ಎಂದು ದೇವರು ಅಥವಾ ಅಲ್ಲಾಹ್ ಅಥವಾ ಯೆಹೋವಾ ಎಂದು ಬಿರುದಾಂಕಿತನಾದ ಪರಮಾತ್ಮ ಶಕ್ತಿ ತನ್ನ ಜ್ಞಾನದಲ್ಲಿ ಹೇಳಿರುವಾಗ, ಮನುಷ್ಯ ಮುಖ್ಯವಾಗಿ ಅಧರ್ಮಗಳನ್ನೇ ಆಚರಿಸುತ್ತಾ ಅವುಗಳನ್ನೇ ಧರ್ಮಗಳೆಂದು ಕರೆಯುತ್ತಿದ್ದಾನೆ. ಈ ವಿಧವಾಗಿ ಮನುಷ್ಯರು ಅಧರ್ಮ

ಯುಕ್ತರಾಗಿರುವಾಗ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"**ಎನ್ನುವ ಜ್ಞಾಪಕ ಬರುತ್ತಿದೆ.

ದೇವರು ಸೃಷ್ಟಿ ಆದಿಯಲ್ಲಿ ಆಕಾಶದ ಮೂಲಕ ಹೇಳಿಸಿದ ಜ್ಞಾನ ಸುಮಾರು ಐದುಸಾವಿರ ವರ್ಷಗಳ ಪೂರ್ವದಲ್ಲಿ, ಅಧರ್ಮಗಳನ್ನು ಬರೆದ ವ್ಯಾಸನಿಂದಲೇ ದೇವರು ಭಗವದ್ಗೀತಾ ಗ್ರಂಥವನ್ನು ಬರೆಯುವಂತೆ ಮಾಡಿದ್ದಾನೆ. ಪ್ರಪಂಚದಲ್ಲಿ ಅಲ್ಲಿಯವರೆಗೂ ಯಾವ ಆಧ್ಯಾತ್ಮಿಕ ಗ್ರಂಥ ಇಲ್ಲದಿರುವುದರಿಂದ ದ್ವಾಪರಯುಗ ಕೊನೆಯಲ್ಲಿ ತಯಾರಾದ ಮೊದಲ ಗ್ರಂಥ **"ಭಗವದ್ಗೀತೆ"** ಆಗಿರುವುದರಿಂದ ಅದನ್ನು **"ಪ್ರಥಮ ದೈವಗ್ರಂಥ"** ಎಂದು ಹೇಳುತ್ತಿದ್ದಾರೆ. ಭಗವದ್ಗೀತೆ ತಯಾರಾದ ನಂತರ ಮೂರುಸಾವಿರ ವರ್ಷಗಳಿಗೆ ಎರಡನೆ ದೈವಗ್ರಂಥವಾದ **"ಇಂಜೀಲು'** ತಯಾರಾಗಿದೆ. ಇಂಜೀಲು ಎಂದರೆ ಬೈಬಲ್ ಎಂದು ಅರ್ಥ. ಇಂಜೀಲ್‌ನಲ್ಲಿ ಕೃಷ್ಣನಂತೆ ಬಂದಿರುವ ಯೇಸು ಹೇಳಿದ ಜ್ಞಾನವನ್ನು ಬರೆಯುವುದು ನಡೆದಿದೆ. ಅದರಲ್ಲಿ ಯೇಸು ಹೇಳಿದ ಜ್ಞಾನ ಕೇವಲ ನಾಲ್ಕು ಸುವಾರ್ತೆಗಳ ರೂಪವಾಗಿದೆ. ಆದರೆ ಬೈಬಲ್ ಮಧ್ಯದಲ್ಲಿ ನಾಲ್ಕು ಸುವಾರ್ತೆಗಳ ಜ್ಞಾನ ಇರುವಾಗ ಅದಕ್ಕಿಂತ ಮೊದಲು ಹಳೆ ಒಡಂಬಡಿಕೆ ಎಂದು 39 ಅಂಶಗಳು ಇವೆ. ಹಾಗೆಯೇ ನಾಲ್ಕು ಸುವಾರ್ತೆಗಳಿಗಿಂತ ಹಿಂದೆ 23 ಅಂಶಗಳು ಇವೆ. ಒಟ್ಟಾರೆ 66 ಪಾಠಗಳಿರುವಾಗ, ಮಧ್ಯದಲ್ಲಿನ ನಾಲ್ಕು ಸುವಾರ್ತೆಗಳನ್ನು ತೆಗೆದುಹಾಕಿದಾಗ ಉಳಿದ 62 ಪಾಠಗಳು ಯೇಸು ಹೇಳಿರುವವು ಅಲ್ಲ. ಯೇಸು ಹೇಳಿದ ಜ್ಞಾನ ನಾಲ್ಕು ಸುವಾರ್ತೆಗಳಲ್ಲಿಯೇ ಇರುವಾಗ ಆ ನಾಲ್ಕು ಸುವಾರ್ತೆಗಳಿಗು ಪ್ರತ್ಯೇಕವಾಗಿ **"ಸುವಾರ್ತೆಗಳು"** ಎಂದು ಹೆಸರು ಇಡುವುದಾಗಿದೆ.

ದ್ವಿತೀಯ ದೈವಗ್ರಂಥವಾಗಿ ಹೆಸರುವಾಸಿಯಾದ ಇಂಜೀಲ್ (ಬೈಬಲ್) ನಲ್ಲಿನ ನಾಲ್ಕು ಸುವಾರ್ತೆಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿದ ಸೃಷ್ಟಿ ಆದಿಯಲ್ಲಿನ ಜ್ಞಾನವೇ ಇದೆ. ಆದರೆ ಭಗವದ್ಗೀತೆಯಲ್ಲಿ ಇರುವಂತೆ ಇರದೆ ಒಂದೇ ಭಾವವನ್ನೇ ಭಾವನೆ ಬದಲಾಗದಂತೆ ಭಾಷೆಯನ್ನು ಬದಲಾಯಿಸಿ ಬರೆದಿರುವುದರಿಂದ

ಇದು ಭಗವದ್ಗೀತೆ ಜ್ಞಾನವೆಂದು ಕ್ರೈಸ್ತರಿಗೆ ತಿಳಿಯದೇ ಹೋಗಿದೆ. ಕ್ರೈಸ್ತರು ಬೈಬಲ್‌ನಲ್ಲಿರುವ ನಾಲ್ಕು ಸುವಾರ್ತೆಗಳಲ್ಲಿನ ದೇವರ ಜ್ಞಾನವನ್ನೇ ಅಲ್ಲದೆ ಉಳಿದ 62 ಪಾಠಗಳ ಜ್ಞಾನವನ್ನು ಓದುವುದರಿಂದ ಯಾವುವು ಮನುಷ್ಯರು ಹೇಳಿದ ಮಾತುಗಳು, ಯಾವು ದೇವರು ಹೇಳಿದ ಜ್ಞಾನವೆಂದು ತಿಳಿಯದೇ ಹೋಗಿದೆ. ಅದರಿಂದ ಬೈಬಲ್ ಓದುವ ಕ್ರೈಸ್ತರೆಲ್ಲರೂ 66 ಪಾಠಗಳನ್ನು ಸೇರಿಸಿಕೊಂಡು ಓದುತ್ತಿದ್ದಾರೆ. ಆದ್ದರಿಂದ ಯಾವುದು ದೇವರ ಮಾತು, ಯಾವುದು ಮನುಷ್ಯರ ಮಾತು ಎಂದು ಅರ್ಥವಾಗದೆ ಹೋಗಿದೆ. ಕ್ರೈಸ್ತರು ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನವನ್ನು ಪ್ರತ್ಯೇಕವಾಗಿ ಗುರುತಿಸಲಾರದೆ ಹೋಗಿದ್ದಾರೆ.

ಬೈಬಲ್ ಮಧ್ಯದಲ್ಲಿರುವ ನಾಲ್ಕು ಸುವಾರ್ತೆಗಳಲ್ಲಿ ದೇವರ ಧರ್ಮಗಳಿರುವಾಗ, ಉಳಿದ ಬೈಬಲ್ ಗ್ರಂಥದಲ್ಲಿ ಎಂದರೆ ನಾಲ್ಕು ಸುವಾರ್ತೆಗಳ ಹಿಂದೆಮುಂದೆ ದೈವಜ್ಞಾನದಂತೆ ಕಾಣಿಸುವ ಅಜ್ಞಾನ ಕೂಡಾ ಇದೆ. ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನಕ್ಕಿಂತ ಎಷ್ಟೋ ಉತ್ತಮವಾಗಿ ಉಳಿದ ಮುಂದೆ ಹಿಂದೆ ಇರುವ ಪಾಠಗಳಲ್ಲಿ ಕಾಣಿಸುತ್ತಿದೆಯೆಂದು ಹೇಳಬಹುದು. ಆದರೆ ಮನುಷ್ಯರು ಅಧರ್ಮಗಳಾಗಿ ಇರುವವುಗಳನ್ನು ಧರ್ಮಗಳಾಗಿ ಭಾವಿಸುವಂತೆ, ಉಳಿದ 62 ಪಾಠಗಳಲ್ಲಿರುವ ಅವುಗಳನ್ನು ಕೂಡಾ ಕ್ರೈಸ್ತರು ಅಸಲಾದ ಜ್ಞಾನವಾಗಿ ಭಾವಿಸಿಕೊಳ್ಳುವುದರಿಂದ ಯೇಸು ಹೇಳಿದ ಜ್ಞಾನ ಅವರಿಗೆ ಸರಿಯಾಗಿ ಅರ್ಥವಾಗದೆ ಹೋಗಿದೆ. ಐದುಸಾವಿರ ವರ್ಷಗಳಾದರೂ ಭಗವದ್ಗೀತೆ ಹಿಂದೂಗಳಿಗೆ ಹೇಗೆ ಅರ್ಥವಾಗದೆ ಹೋಗಿದೆಯೋ, ಹಾಗೆಯೇ ಬೈಬಲ್ ಬಂದು ಎರಡು ಸಾವಿರ ವರ್ಷಗಳಾದರೂ ಬೈಬಲ್‌ನಲ್ಲಿನ ಜ್ಞಾನ ರವೆಯಷ್ಟು ಕೂಡಾ ಕ್ರೈಸ್ತರಿಗೆ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಯೇಸು ಎನ್ನುವ ವ್ಯಕ್ತಿ ಮನುಷ್ಯನಾಗಿ ಕಾಣಿಸಿ ಹೇಳಿದ ಜ್ಞಾನ, ಜ್ಞಾನವಾಗಿ ಕಾಣಿಸದೆ ಆತನು ಅಂದಿಗೆ ತಕ್ಕಂತೆ ಮಾತನಾಡಿದ ಮಾತುಗಳಾಗಿ ಎಲ್ಲರಿಗೂ ಅರ್ಥವಾಗಿವೆ. ಯೇಸು ಹೇಳಿದ ಮಾತುಗಳಲ್ಲಿನ ಸಾರಾಂಶ ಭಗವದ್ಗೀತೆಯಲ್ಲಿ ಹೇಳಿದ

ಜ್ಞಾನದೊಂದಿಗೆ ಸಮಾನವಾಗಿ ಇದೆಯೆಂದು ಬಹಳಜನ ಕ್ರೈಸ್ತರಿಗೆ ತಿಳಿದಿಲ್ಲ. ನಾವು ಯೇಸು ಹೇಳಿದ ಜ್ಞಾನ, ಕೃಷ್ಣನು ಹೇಳಿದ ಜ್ಞಾನ ಎರಡು ಒಂದೇಯೆಂದರೆ ಕ್ರೈಸ್ತರಿಗೆ ಏನೂ ಅರ್ಥವಾಗದೆ ಯೇಸು ಜ್ಞಾನವನ್ನು ಕೃಷ್ಣನ ಜ್ಞಾನವನ್ನು ಉತ್ತರ ದಕ್ಷಿಣವಾಗಿ ನೋಡುತ್ತಿದ್ದಾರೆ. ಯೇಸು ಕೃಷ್ಣನು ಒಬ್ಬರೇಯೆಂದು ಹೇಳಿದರೆ ಆ ಮಾತು ಪೂರ್ತಿ ಅಜೀರ್ಣವಾಗುತ್ತಿದೆ.

ದೇವರ ಜ್ಞಾನವನ್ನು ದೇವರೇ ಹೇಳಬೇಕಾಗಿರುವಾಗ, ದೇವರು ಪ್ರಜೆಗಳಿಗೆ ತನ್ನ ಜ್ಞಾನ ಹೇಳುವ ನಿಮಿತ್ತ ಆತನೇ ಬರಬೇಕಾಗಿದೆ. ಆದರೆ ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಎನ್ನುವ ನಿಯಮವನ್ನು ಅನುಸರಿಸಿ, ದೇವರು ದೇವರಾಗಲ್ಲದೆ ಭಗವಂತನಾಗಿ ಬರುತ್ತಿದ್ದಾನೆ. ದೇವರು ಕಾಣಿಸದವನಾಗಿದ್ದು, ಭಗವಂತನು ಕಾಣಿಸುವ ಶರೀರದೊಂದಿಗೆ ಇರುತ್ತಾನೆ. **ದೇವರು ನಾಮ, ರೂಪ, ಕ್ರಿಯೆ ಎನ್ನುವ ಮೂರು ಇಲ್ಲದವನಾಗಿದ್ದು, ಭಗವಂತನು ನಾಮ, ರೂಪ, ಕ್ರಿಯೆಗಳು ಇರುವವನಾಗಿದ್ದಾನೆ.** ದೇವರು ಭಗವಂತನಾಗಿ ಭೂಮಿಮೇಲಕ್ಕೆ ಬಂದಾಗ ಆತನನ್ನು ಯಾರೂ ಗುರುತಿಸದಂತೆ ತನ್ನ ಜೀವನವನ್ನು ನಿರ್ಮಿಸಿಕೊಂಡು ಹುಟ್ಟುತ್ತಾನೆ. ಮೊದಲೇ ಒಂದು ಯೋಜನೆಯ ಪ್ರಕಾರ ಹುಟ್ಟಿದ ಭಗವಂತನನ್ನು ದೇವರೆಂದು ಯಾರೂ ಗ್ರಹಿಸಲಾರರು. ಅದೇ ವಿಧಾನದ ಪ್ರಕಾರ ಭಗವದ್ಗೀತೆಯನ್ನು ಹೇಳಿದ ಕೃಷ್ಣನಾಗಿ ದೇವರು ಬರುವುದು ನಡೆದಿದೆ. ಕೃಷ್ಣನಾಗಿ ಶರೀರವನ್ನು ಧರಿಸಿ ಬಂದಿರುವ ದೇವರನ್ನು ಆ ದಿನ ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಒಬ್ಬ ಭೀಷ್ಮನಿಗೆ ಹೊರತು ಕೃಷ್ಣನು ಯಾರಾಗಿರುವುದು ಉಳಿದವರಿಗೆ ಯಾರಿಗೂ ತಿಳಿದಿಲ್ಲ. ಕೃಷ್ಣನು ದೇವರೆಂದು ನಿರೂಪಿಸುವುದಕ್ಕೆ ಸಾಕ್ಷಿಯಾಗಿ ಭೀಷ್ಮನಿಗೊಬ್ಬನಿಗೆ ಮಾತ್ರ ಕೃಷ್ಣನು ದೇವರೆಂದು ತಿಳಿದಿದೆ. ಆದರೆ ಆತನು ಭೌತಿಕವಾಗಿ ಕಳೆದ ಜೀವನವನ್ನು ನೋಡಿದರೆ, ಕೃಷ್ಣನನ್ನು ದೇವರೆಂದು ಅಲ್ಲ ಕನಿಷ್ಟ ಜ್ಞಾನಿ ಎಂದು ಕೂಡಾ ಎನ್ನುವುದಿಲ್ಲ. ಜ್ಞಾನವಿಲ್ಲದ ಮನುಷ್ಯ ಪ್ರವರ್ತಿಸಿದಂತೆ ಕೃಷ್ಣನು ತನ್ನ ನಿಜ ಜೀವನದಲ್ಲಿ ಪ್ರವರ್ತಿಸಿದ್ದಾನೆ.

ಕೃಷ್ಣನ ಜೀವನ ಒಂದು ವಿಧವಾಗಿದ್ದು, ಯೇಸು ಜೀವನದಲ್ಲಿ ಮತ್ತೊಂದು ವಿಧವಾಗಿದೆ. ಕೃಷ್ಣನು ಧನಿಕನಾಗಿ ಜೀವಿಸಿದರೆ, ಯೇಸು ಪೂರ್ತಿ ಬಡವನಾಗಿ ಬದುಕಿದ್ದಾನೆ. ಇಬ್ಬರ ಜೀವನಗಳನ್ನು ಪರಿಶೀಲಿಸಿ ನೋಡಿದರೆ ಪೂರ್ತಿ ಬೇರೆಬೇರೆ ವಿಧಾನಗಳಾಗಿದೆ. ಭಾರತದೇಶದಲ್ಲಿ ಕೃಷ್ಣನಾಗಿ ಬಂದಿರುವ ದೇವರೇ ಇಸ್ರಾಯೇಲು ದೇಶದಲ್ಲಿ ಯೇಸುವಾಗಿ ಬಂದಿದ್ದಾನೆಂದು ಯಾರೂ ಊಹಿಸಲಾರರು. ಆದರೂ ಕೃಷ್ಣನು ಹೇಳಿದ ಜ್ಞಾನವನ್ನೇ ಯೇಸು ಹೇಳುವುದು ನಡೆದಿದೆ. ಭೌತಿಕವಾಗಿ ಬೇರೆಬೇರೆಯಾಗಿ ಕಾಣಿಸುವ ಕೃಷ್ಣನು, ಯೇಸು ಆಧ್ಯಾತ್ಮಿಕವಾಗಿ ಪರಿಶೀಲಿಸಿದರೆ ಇಬ್ಬರೂ ಒಂದೇ ಜ್ಞಾನವನ್ನು ಹೇಳಿದಂತೆ ಅರ್ಥವಾಗುತ್ತದೆ. ಆದರೆ ಮನುಷ್ಯರಿಗೆ ಭೌತಿಕ ದೃಷ್ಟಿ ಹೊರತು ಆಧ್ಯಾತ್ಮಿಕ ದೃಷ್ಟಿ ಇಲ್ಲದಿರುವುದರಿಂದ ಕೃಷ್ಣನು, ಯೇಸು ಇಬ್ಬರೂ ಒಬ್ಬರೇ ಎನ್ನುವ ವಿಷಯ ತಿಳಿಯದೇ ಹೋಗಿದೆ. ಯೇಸು ಜೀವನದಲ್ಲಿ ಆತನನ್ನು ನಂಬಿ ಆತನ ಹಿಂದೆ ತಿರುಗಿದ ಶಿಷ್ಯರು ಕೇವಲ ಹನ್ನೊಂದುಜನರೇ. ಆ ಹನ್ನೊಂದು ಜನರು ಕೂಡಾ ಕೆಲವು ಸಮಯಗಳಲ್ಲಿ ಯೇಸುನನ್ನು ಪೂರ್ತಿಯಾಗಿ ನಮ್ಮಲಾರದೆ ಹೋಗಿದ್ದಾರೆ. ಆತನ ಮಾತನ್ನು ಪೂರ್ತಿ ವಿಶ್ವಾಸಿಸದೆಹೋಗಿದ್ದಾರೆ. ಯೇಸು ತನ್ನ ತಾತ್ಕಾಲಿಕ ಮರಣದಿಂದ ಎದ್ದುಬಂದ ನಂತರ ಆತನನ್ನು ಪೂರ್ತಿಯಾಗಿ ನಂಬಲಾರದಿದ್ದಾರೆ. ಮನುಷ್ಯನಾಗಿ, ತಮ್ಮ ಗುರುವಾಗಿ ಆತನನ್ನು ನೋಡದಂತೆ ಒಂದು ದೆವ್ವ ಬಂದು ಮಾತನಾಡಿದಂತೆ ಭಾವಿಸಿದ್ದಾರೆ. ಆದ್ದರಿಂದ ಯೇಸು ತನ್ನ ಶಿಷ್ಯರಿಗೆ ಶಿಲುಬೆ ಸಂಘಟನೆ ನಂತರ 33 ಸಲ ಮಾತ್ರ ಕಾಣಿಸಿ ನಂತರ ಅಲ್ಲಿಂದ ಪರದೇಶಕ್ಕೆ ಹೊರಟುಹೋಗುವುದು ನಡೆದಿದೆ. ಇದೆಲ್ಲವೂ ಭೌತಿಕವಾಗಿ ನೋಡಿದರೆ ಆತನನ್ನು ದೇವರೆಂದು ಯಾರೂ ನಂಬುವುದಿಲ್ಲ. ನಂಬಬಾರದೆನ್ನುವುದೇ ದೇವರ ಭಾವನೆ.

ಯೇಸು ತನ್ನ ಜೀವನದಲ್ಲಿ ಹೇಳಿದ ಬೋಧನೆಗಳು ಭಗವದ್ಗೀತೆಯಲ್ಲಿನ ಕೆಲವು ವಾಕ್ಯಗಳಿಗೆ ಸಮಾನವಾಗಿ ಇದ್ದರೂ, ಅಲ್ಲಿ 'ಭಗವದ್ಗೀತೆಯಲ್ಲಿ' ಹೇಳಿರುವುದಕ್ಕೆ ಇಲ್ಲಿ 'ಸುವಾರ್ತೆಗಳ'ಲ್ಲಿ ಹೇಳಿರುವುದಕ್ಕೆ ಹೋಲಿಕೆಯನ್ನು ಯಾರೂ ಗುರುತಿಸಲಿಲ್ಲ. ಆದ್ದರಿಂದ ಕೃಷ್ಣನು, ಯೇಸು ಹೇಳಿದ ಒಂದೇ

ಜ್ಞಾನವನ್ನು ಬೇರಬೇರೆ ಜ್ಞಾನಗಳಾಗಿ ಮನುಷ್ಯರು ಅಂದುಕೊಳ್ಳುವುದು ನಡೆಯುತ್ತಿದೆ. ಜ್ಞಾನಗಳು ಬೇರೆಬೇರೆ ಎಂದುಕೊಂಡ ಮನುಷ್ಯರು ಅಲ್ಲಿಗೆ ಸುಮ್ಮನಾಗದೆ ಮತಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಅದರಿಂದ ನಮ್ಮ ಮತ ಬೇರೆ, ನಮ್ಮ ಜ್ಞಾನ ಬೇರೆ, ನಮ್ಮ ದೇವರು ಬೇರೆಯೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಮೂರು ಯುಗಗಳಲ್ಲಿ ನಾಲ್ಕು ಅಧರ್ಮಗಳಿರುವಾಗ ಆ ನಾಲ್ಕು ಅಧರ್ಮಗಳನ್ನು ಕುರಿತು ಕೃಷ್ಣ ಭಗವಾನನು ತನ್ನ ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಹಾಗೆ ಬಂದ ನಂತರ ಕಲಿಯುಗದಲ್ಲಿ ಯೇಸುಹುಟ್ಟಿ ಜ್ಞಾನ ಹೇಳಿದ ನಂತರ **ಮತ** ಎನ್ನುವುದು ಪ್ರಾರಂಭವಾಗಿದೆ. ಅಲ್ಲಿಯವರೆಗೂ ಇಲ್ಲದ ಮತ ಯೇಸು ಬಂದ ನಂತರ ಬಂದು ಮೊದಲು ಚಿಕ್ಕ ಸಂಘವಾಗಿ ತಯಾರಾಗಿ, ನಂತರ ದೊಡ್ಡ ಸಮಾಜವಾಗಿ ತಯಾರಾಗಿ, ಕೊನೆಗದು ಮತವಾಗಿ ರೂಪಾಂತರ ಹೊಂದುವುದು ನಡೆದಿದೆ. ಯೇಸು ಬದುಕಿರುವಾಗಲೇ 'ಮತ' ಎನ್ನುವುದು ತಯಾರಾಗುವುದು ಪ್ರಾರಂಭವಾಗಿದೆ.

'ಮತ' ಎನ್ನುವುದು ಹೊಸದಾಗಿ ಹುಟ್ಟಿದ ಐದನೆ ಅಧರ್ಮವಾಗಿ ತಯಾರಾಗಿದೆ. ಆ ವಿಧವಾಗಿ ಕಲಿಯುಗದಲ್ಲಿ ಎರಡುಸಾವಿರ ವರ್ಷಗಳ ಕೆಳಗೆ ಹುಟ್ಟಿದ ಮತ ಈದಿನ ಪೂರ್ತಿ ಬಲವಾದ ಅಧರ್ಮವಾಗಿ ರೂಪಾಂತರ ಗೊಂಡಿದೆ. ನಾಲ್ಕು ಅಧರ್ಮಗಳಿರುವ ದ್ವಾಪರಯುಗದಲ್ಲಿಯೇ ಅಧರ್ಮಗಳನ್ನು ನಿರ್ಮೂಲಿಸುವುದಕ್ಕೆ ಕೃಷ್ಣನು ಜ್ಞಾನ ಹೇಳಿದರೆ, ಅಧರ್ಮಗಳು ಸ್ವಲ್ಪ ಅಡಕವಾದಂತಾಗಿ ಪುನಃ ಬಲವನ್ನು ಕೈಗೂಡಿಸಿಕೊಂಡಿವೆ. ಅಲ್ಲಿಗೆ ಸುಮ್ಮನಾಗದೆ ಕಲಿಯುಗದಲ್ಲಿ ಐದನೆ ಅಧರ್ಮವಾದ 'ಮತ' ಎನ್ನುವುದು ಹುಟ್ಟಿಬಂದಿದೆ. ನಾಲ್ಕು ಅಧರ್ಮಗಳು ಇರುವಾಗಲೇ ದೇವರು ಭಗವಂತನಾಗಿ ಬಂದಿದ್ದಾನೆ. ಐದು ಅಧರ್ಮಗಳಿರುವಾಗ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"**ಎಂದು ಹೇಳಬಹುದು. ಈ ಸಮಯದಲ್ಲಿ ದೇವರು ತಪ್ಪದೆ ಬಂದು ಐದು ಅಧರ್ಮಗಳನ್ನು ರೂಪಬದಲಿಸುವುದಕ್ಕೆ ಪ್ರಯತ್ನಿಸುತ್ತಾನೆಂದು ಅಂದು ಕೊಳ್ಳುತ್ತಿದ್ದೇವೆ. ಯೇಸು ತನ್ನ ಜೀವಿತ ಕಾಲದಲ್ಲಿಯೇ 'ಮತ' ಎನ್ನುವ

ಅಧರ್ಮವು ಜನ್ಮತಾಳಿದೆಯೆಂದು ಗ್ರಹಿಸಿದ್ದಾನೆ. ಆದರೆ ಆಗ ಮತಕ್ಕೆ ಸಂಬಂಧಿಸಿದ ವಿಷಯವನ್ನು ಹೇಳಿದರೂ ಪ್ರಜೆಗಳು ಅರ್ಥ ಮಾಡಿಕೊಳ್ಳುವ ಸ್ಥಿತಿಯಲ್ಲಿ ಇಲ್ಲವೆಂದು ಅಂದುಕೊಂಡಿದ್ದಾನೆ. ಆದುದರಿಂದ ಯೇಸು ತನ್ನ ಬಾಯಿಂದ ಒಂದು ಮಾತನ್ನು ಹೇಳಿದ್ದಾನೆ. ಅದು ಯೋಹಾನ್ ಸುವಾರ್ತೆ 16ನೇ ಅಧ್ಯಾಯ 12ನೇ ವಚನ ಹೀಗಿದೆ. **(ಯೋಹಾನ್–16–12) "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ ಆದರೆ ಅವುಗಳನ್ನು ನೀವು ಈಗ ಸಹಿಸಲಾರರು"** ಎಂದು ಹೇಳಿದ್ದಾನೆ. ಆಗ ಮತವನ್ನು ಕುರಿತು ಹೇಳಬೇಕಾದ ಸಮಾಚಾರವಿದ್ದರೂ, ಆಗಲೇ ಹುಟ್ಟಿದ ಮತವನ್ನು ಕುರಿತು ಬಹಳಜನರಿಗೆ ಏನು ತಿಳಿದಿಲ್ಲ. ಆದ್ದರಿಂದ 'ನಿಮಗೆ ಈಗ ಹೇಳಿದರೂ ಅರ್ಥ ವಾಗುವುದಿಲ್ಲ' ಎನ್ನುವ ಉದ್ದೇಶದಿಂದ ಹಾಗೆ ಹೇಳಿದ್ದಾನೆ ಎಂದು ಅಂದುಕೊಳ್ಳೋಣ.

**ಪ್ರಶ್ನೆ :– ದೇವರು ದ್ವಾಪರಯುಗದ ಕೊನೆಯಲ್ಲಿ ಭಗವಂತನಾಗಿ ಬಂದು ದುಷ್ಕೃತಗಳನ್ನು ವಿನಾಶ ಮಾಡಿ ಧರ್ಮಸಂಸ್ಥಾಪನೆ ಆರಂಭಿಸಿದ್ದರೆ ಅಂದಿನಿಂದ ಇಂದಿನವರೆಗು ಹೇಗಿರುವ ಅಧರ್ಮಗಳು ಹಾಗೆ ಇವೆ ಅಲ್ಲವೆ! ಎಂದು ಪ್ರಶ್ನಿಸುತ್ತಿದ್ದೇವೆ. ಹಾಗೆಯೇ ಆದಿನ ನಾಲ್ಕು ಅಧರ್ಮಗಳೇ ಇವೆ. ಇಂದು ಇನ್ನೊಂದು ಅಧರ್ಮ ಹುಟ್ಟಿ ಒಟ್ಟಾರೆ ಐದು ಅಧರ್ಮಗಳಾಗಿವೆ. ಇದರ ಪ್ರಕಾರ ಭಗವದ್ಗೀತಾ ಜ್ಞಾನವನ್ನು ಹೇಳಿದರೂ ಅಧರ್ಮ ಕ್ಷೀಣಿಸುವುದು ನಡೆಯಲಿಲ್ಲ. ಹಾಗಿರುವಾಗ ದ್ವಾಪರಯುಗದಲ್ಲಿ ಭಗವಂತನು ಬಂದು ಏನು ಮಾಡಿದಂತೆ?**

**ಉತ್ತರ :–** ದೇವರು ಭೂಮಿಮೇಲೆ ಅವತರಿಸಿ ಧರ್ಮಸಂಸ್ಥಾಪನೆ ಮಾಡುವುದು, ಅಧರ್ಮ ನಿರ್ಮೂಲನೆ ಮಾಡುವುದು ಮಾಡುತ್ತಾನೆಂದು ನಾವು ಗ್ರಂಥದಲ್ಲಿ ಓದಿದ್ದೇವೆ. ಆದರೆ ಇಲ್ಲಿ ಯಾರಿಗೂ ತಿಳಿಯದ ವಿಧಾನವೊಂದಿದೆ ಅದೇನೆಂದರೆ! ದೇವರು ಮೂರು ಆತ್ಮಗಳಾಗಿ ಇದ್ದಾನೆ. ಆದ್ದರಿಂದ ದೇವರು ಭಗವಂತನಾಗಿ ಮೂರು ಸಲ ಹುಟ್ಟಿದರೆ ದೇವರಿಗೆ ಒಂದು ಅವತಾರವಾಗುತ್ತದೆ. ದೇವರು ಒಂದುಸಲ ಅವತರಿಸಿ ಧರ್ಮಸಂಸ್ಥಾಪನೆ ಮಾಡುತ್ತಾನೆ ಅಂದರೆ ಅದು

ಒಂದುಸಲ ಹುಟ್ಟುವುದರಿಂದ ಮುಗಿದುಹೋಗುವುದಿಲ್ಲ. ದೇವರು ಮೂರುಸಲ ಭಗವಂತನಾಗಿ ಬಂದರೆ ದೇವರಿಗೆ ಒಂದು ಅವತಾರವಾಗುತ್ತದೆ. ಆಗ ಪೂರ್ತಿ ಅಧರ್ಮಗಳ ನಿರ್ಮೂಲನೆ ನಡೆಯುತ್ತದೆ ಮತ್ತು ಪೂರ್ತಿಯಾಗಿ ಧರ್ಮಸಂಸ್ಥಾಪನೆ ನಡೆಯುತ್ತದೆ. ಈ ವಿಧಾನ ತಿಳಿಯದವರು ಕೃಷ್ಣನಾಗಿ ಬಂದಿರುವುದು ದೇವರಿಗೆ ಒಂದು ಅವತಾರ ಎಂದುಕೊಳ್ಳುವುದು ತಪ್ಪಾಗುತ್ತದೆ. ಕೃಷ್ಣನ ಜನ್ಮ ದೇವರ ಅವತಾರದಲ್ಲಿ ಒಂದು ಭಾಗವೇ ಹೊರತು, ಒಂದು ಅವತಾರ ಅಲ್ಲ. ಧರ್ಮಸಂಸ್ಥಾಪನೆಗಾಗಿ **"ಸಂಭವಾಮಿ ಯುಗೇ ಯುಗೇ"** ಎಂದಿದ್ದಾನೆ. ಅಂದರೆ "ಧರ್ಮ ಸಂಸ್ಥಾಪನೆಗೋಸ್ಕರ ಯಾವ ಯುಗದಲ್ಲಿ ಆದರೂ ಬರುತ್ತೇನೆ" ಎಂದು ಹೇಳುವುದಾಗಿದೆ. ಕೃಷ್ಣನ ಜನ್ಮ ದ್ವಾಪರಯುಗದ ಕೊನೆಯಲ್ಲಿ ಕಲಿಯುಗದ ಪ್ರಾರಂಭದಲ್ಲಿ ನಡೆದಿದೆ. ದ್ವಾಪರಯುಗಕ್ಕು, ಕಲಿಯುಗಕ್ಕು ಸಂಧಿ ಕಾಲದಲ್ಲಿ ದ್ವಾಪರಯುಗದಲ್ಲಿ ಸ್ವಲ್ಪ ನಡೆದಿರುವುದರಿಂದ, ಕಲಿಯುಗ ಸಂಧಿ ಹೆಚ್ಚಾಗಿ ಇರುವುದರಿಂದ ಕೃಷ್ಣನ ಜನ್ಮ ದ್ವಾಪರಯುಗದಲ್ಲಿಯೇ ನಡೆದಿದೆಯೆಂದು ತೀರ್ಮಾನಿಸಿ ಹೇಳಬಹುದು.

ಇದನ್ನನುಸರಿಸಿ ಕೃಷ್ಣನ ಜನ್ಮ ದ್ವಾಪರ ಯುಗಕ್ಕೆ ಸಂಬಂಧಿಸಿರುವುದೇ ಎಂದು ನಿರ್ಣಯಿಸುವುದಾಗಿದೆ. ಯಾವ ಯುಗದಲ್ಲಿ ದೇವರು ಅವತರಿಸಿದರೂ ಎರಡು, ಮೂರು ಯುಗಗಳಲ್ಲಿಯೇ ಮೂರು ಅವತಾರಗಳು ಬರಬಹುದು. ಹಾಗೆ ಬಂದರೆ ದ್ವಾಪರಯುಗದಲ್ಲಿ ದೇವರಿಗೆ ಒಂದು ಅವತಾರ ನಡೆದಂತಾ ಗುತ್ತದೆ. ಕೃಷ್ಣನ ಜನ್ಮ ದೇವರ ಅವತಾರದಲ್ಲಿ ಒಂದು ಭಾಗವಾಗುವುದರಿಂದ, ದೇವರು ಬಂದ ಕೆಲಸ ಒಂದು ಭಾಗ ಮಾತ್ರವೇ ನೆರವೇರುತ್ತದೆಂದು ಹೇಳಬಹುದು. ಆದರೆ ಕೃಷ್ಣನು ಬಂದು ಏನು ಮಾಡಿದ್ದಾನೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಆತನು ಬಂದು ಅಧರ್ಮಗಳು ಎಲ್ಲಿ ಹುಟ್ಟಿವೆಯೊ ಅಲ್ಲಿಯೇ ಧರ್ಮಪ್ರತಿಷ್ಠಾಪನೆ ಮಾಡಬೇಕೆಂದುಕೊಂಡಿದ್ದಾನೆ. ಆದುದರಿಂದ ಅಧರ್ಮಗಳನ್ನು ಒಂದುಕಡೆ ಸೇರಿಸಿ ಗ್ರಂಥಗಳಾಗಿ ಬರೆದ ವ್ಯಾಸನು ಆ ಕಾಲದಲ್ಲಿ ಅತಿದೊಡ್ಡ ದುಷ್ಟನೆಂದು ಲೆಕ್ಕಿಸಿ ಆತನನ್ನೇ ಮೊದಲು ಬದಲಾಯಿಸಬೇ

ಕೆಂದುಕೊಂಡಿದ್ದಾನೆ. ಒಂದು ಯೋಜನೆಯ ಪ್ರಕಾರ ತನ್ನ ಬೋಧನೆಯನ್ನು ಅರ್ಜುನನಿಗೆ ಹೇಳಿ ನಂತರ ಆ ಬೋಧನೆಯನ್ನು ವ್ಯಾಸನ ಹತ್ತಿರಕ್ಕೆ ಅರ್ಜುನನ ಮೂಲಕ ಹೋಗುವಂತೆ ಮಾಡಿದ್ದಾನೆ. ಕೃಷ್ಣನು ಹೇಳಿದ ಜ್ಞಾನವನ್ನು ಕೇಳಿದ ಮೊದಲ ವ್ಯಕ್ತಿ ಅರ್ಜುನನಾಗಿದ್ದು, ಕೃಷ್ಣನು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಂಡ ಮೊದಲ ವ್ಯಕ್ತಿ ವೇದವ್ಯಾಸನು ಎಂದು ಹೇಳಬಹುದು. ಅದೇ ಕೃಷ್ಣನು ನೇರವಾಗಿ ವ್ಯಾಸನಿಗೆ ಹೇಳಿದ್ದರೆ ವ್ಯಾಸನು ಕೇಳುವವನಲ್ಲ. ಅರ್ಜುನನ ಮೂಲಕ ಸೇರಿದ ಜ್ಞಾನವನ್ನು ವ್ಯಾಸನು ಗ್ರಹಿಸಿದ್ದಾನೆ. ಹಾಗೆ ಗ್ರಹಿಸಿದವನು ತಾನು ವೇದಗಳನ್ನು, ಪುರಾಣಗಳನ್ನು ಬರೆದು ತಪ್ಪು ಮಾಡಿದ್ದೇನೆಂದು ಅರ್ಥ ಮಾಡಿಕೊಂಡಿದ್ದಾನೆ. ತನ್ನ ಅಜ್ಞಾನ ಕ್ರಿಯೆಗೆ ತಾನೇ ಪಶ್ಚಾತ್ತಾಪದಿಂದ ಬಾಧೆಪಟ್ಟು, ಪಾಪಪರಿಹಾರ ನಿಮಿತ್ತ ಕೃಷ್ಣನು ಹೇಳಿದ ಬೋಧನೆಯನ್ನು ಗ್ರಂಥರೂಪವಾಗಿ ಬರೆಯುವುದರಿಂದ ವ್ಯಾಸನು ಪೂರ್ತಿ ಬದಲಾಗಿಹೋಗಿದ್ದಾನೆಂದು ಎಲ್ಲರಿಗೂ ತಿಳಿದಿದೆ.

ಅಲ್ಲಿಗೆ ಮನುಷ್ಯರೊಳಗೆ ಹರಡಿಹೋಗಿರುವ ವೇದಗಳನ್ನು ಕೆಲವರು ವ್ಯಾಸನ ಬದಲಾವಣೆಯನ್ನು ನೋಡಿ ಬಿಟ್ಟಿದ್ದಾರೆ. ವ್ಯಾಸನ ಪರಿವರ್ತನೆಯನ್ನು ಗ್ರಹಿಸಿದ ಬಹುಸ್ವಲ್ಪಜನ ವೇದಗಳಿಗೆ ದೂರವಾಗಿ ಇದ್ದರು. ಆದರೆ ವ್ಯಾಸನಲ್ಲಿನ ಬದಲಾವಣೆಯನ್ನು ಬಹಳಜನ ಗ್ರಹಿಸಲಾರದೆ ಹೋಗಿದ್ದಾರೆ. ವ್ಯಾಸನು ಬದಲಾಗಿರುವುದು ಭಗವದ್ಗೀತೆ ಜ್ಞಾನದಿಂದ ಎಂದು ಅವರಿಗೆ ತಿಳಿದಿಲ್ಲ. ಕೆಲವರಿಗೆ ವ್ಯಾಸನ ಬದಲಾವಣೆ ಕಾಣಿಸಿದರೂ, ಅವರ ಸ್ವಾರ್ಥಕ್ಕಾಗಿ ವೇದಗಳನ್ನು ಹಿಡಿದುಕೊಂಡಿದ್ದಾರೆ. ಒಟ್ಟಾರೆ ಕೃಷ್ಣನು ಒಂದುಸಲ ತನ್ನ ಜ್ಞಾನವನ್ನು ಅರ್ಜುನನಿಗೆ ಮಾತ್ರ ಹೇಳಿ, ವೇದಗಳಿಗೆ ಬುನಾದಿ ಹಾಕಿದವನನ್ನು ಇಲ್ಲದಂತೆ ಮಾಡಿ ಸನ್ಮಾರ್ಗನನ್ನಾಗಿ ಬದಲಾಯಿಸಿದ್ದಾನೆ. ದೇವರ ಜನ್ಮದಲ್ಲಿ ಒಂದು ಭಾಗವಾದ ಕೃಷ್ಣ ಜನ್ಮದಲ್ಲಿ ಪ್ರಥಮ ದೈವಗ್ರಂಥವು ಪ್ರಕಟಿಸಿ ಧರ್ಮಸಂಸ್ಥಾಪನೆಗೆ ನಾಂದಿ ನುಡಿದಿದ್ದಾನೆ. ಹಾಗೆಯೇ ದುಷ್ಟ ವಿನಾಶದಲ್ಲಿ ಭಾಗವಾಗಿ 'ವ್ಯಾಸೊ ನಾರಾಯಣ' ಎಂದು ಹೆಸರುವಾಸಿಯಾದ ಐರಾವತದಂತಹ ವ್ಯಾಸನನ್ನು

ಆತನ ಭಾವನೆಯಿಂದ ಬದಲಾವಣೆಮಾಡಿ ದುಷ್ಟಶಿಕ್ಷಣಗೂ ಸಹ ನಾಂದಿ ನುಡಿದಿದ್ದಾನೆ. ಹಾಗೆ ಪ್ರಪ್ರಥಮವಾದ ಎರಡು ಕೆಲಸಗಳನ್ನು ಕೃಷ್ಣನು ತನ್ನ ಒಂದು ಬೋಧನೆಯಿಂದ ಸಾಧಿಸಲ್ಪಟ್ಟಿದ್ದಾನೆ. ದೇವರ ಅವತಾರದಲ್ಲಿ ಭಾಗವಾದ ಕೃಷ್ಣ ಜನ್ಮದಲ್ಲಿ ಒಬ್ಬ ಅರ್ಜುನನಿಗೆ ಮಾತ್ರವೇ ಒಂದುಸಲ ಹೊರತು ಎರಡನೇ ಸಲ ಜ್ಞಾನವನ್ನು ಹೇಳಲಿಲ್ಲ. ದೇವರ ಅವತಾರದಲ್ಲಿ ಮೊದಲ ಭಾಗವಾದ ಕೃಷ್ಣನು ಅರ್ಜುನನಿಗೆ ಹೊರತು ಆ ಜನ್ಮದಲ್ಲಿ ಎರಡನೇ ವ್ಯಕ್ತಿಗೆ ಬೋಧಿಸಲಿಲ್ಲ, ಎರಡನೇ ಸಲ ಬೋಧಿಸಲಿಲ್ಲ. ಕೃಷ್ಣನು ಬದುಕಿದ 126 ವರ್ಷ ಕಾಲದಲ್ಲಿ ಯಾರೂ ಕೇಳದಂತೆ ಐದಾರು ನಿಮಿಷಗಳು ಮಾತ್ರ ಬೋಧನೆಯನ್ನು ಹೇಳಿ, ಉಳಿದ ಕಾಲವೆಲ್ಲವೂ ಎಲ್ಲ ಕೆಲಸಗಳು ಮಾಡುತ್ತಾ ಹಾಯಾಗಿ ಕಾಲವನ್ನು ಕಳೆದಿದ್ದಾನೆ. ಆದುದರಿಂದ ಆತನು ಭಗವಂತನೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ.

**ಪ್ರಶ್ನೆ :– ದೇವರ ಅವತಾರ ಮೂರು ಜನ್ಮಗಳಿಂದ ಕೂಡಿಕೊಂಡಿರುತ್ತದೆಂದು ಇಲ್ಲಿಯವರೆಗೂ ಯಾರೂ ಹೇಳಲಿಲ್ಲ. ಯಾವ ಗ್ರಂಥದಲ್ಲಿಯೂ ಬರೆಯಲಿಲ್ಲ. ಯಾರೂ ಹೇಳದಿರುವುದು, ಎಲ್ಲಿಯೂ ಬರೆಯದಿರುವುದು ನೀವು ಹೇಗೆ ಹೇಳುತ್ತಿದ್ದೀರ? ನಿಮ್ಮ ಮಾತಿಗೆ ಏನಾದರೂ ಶಾಸ್ತ್ರಾಧಾರವಿದೆಯಾ? ಅಥವಾ ಪ್ರತ್ಯಕ್ಷ ಆಧಾರವಿದೆಯಾ?**

**ಉತ್ತರ :– 'ದೇವರು'** ಎಂದರೆ ಮೂರು ಭಾಗಗಳಾಗಿ, ಮೂರು ಆತ್ಮಗಳಾಗಿ ಇದ್ದಾನೆಂದು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಹಾಗೆಯೇ ದೇವರ ಅವತಾರ ಕೂಡಾ ಮೂರು ಭಾಗಗಳಾಗಿ ಇರುತ್ತದೆಂದು ತಪ್ಪದೆ ಅಂದುಕೊಳ್ಳಬೇಕಾಗಿದೆ. ಇದಕ್ಕೆ ಶಾಸ್ತ್ರಾಧಾರಕ್ಕಿಂತ ಪ್ರತ್ಯಕ್ಷಾಧಾರ ಮುಖ್ಯವಾಗಿ ಇದೆ. ಕೃಷ್ಣನು ಭಗವಂತನಾಗಿ ಬಂದಾಗ ಪೂರ್ತಿಯಾಗಿ ಅಧರ್ಮ ನಿರ್ಮೂಲನೆ ಆಗಲಿಲ್ಲ. ಹಾಗೆಯೇ ಪೂರ್ತಿಯಾಗಿ ಹೆಚ್ಚಿನ ಸಂಖ್ಯೆಯಲ್ಲಿ ದುಷ್ಟರನ್ನು ಕೂಡಾ ಸನ್ಮಾರ್ಗರನ್ನಾಗಿ ಬದಲಾಯಿಸಲಿಲ್ಲ. ಆದುದರಿಂದ ಕೃಷ್ಣನ ನಂತರ ಇನ್ನೂ ಎರಡು ಜನ್ಮಗಳಿವೆಯೆಂದು ಗಟ್ಟಿಯಾಗಿ ಹೇಳಬೇಕಾಗಿ

ಬಂದಿದೆ. ಧರ್ಮ ಸಂಸ್ಥಾಪನೆ ಮಾಡುವುದಕ್ಕೆ, ಯುಗ ಯುಗದಲ್ಲಿ ಎಂದು ಯುಗೇ ಯುಗೇ ಎಂದು ಹೇಳುವುದರಲ್ಲಿ ಒಂದು ಧರ್ಮಸಂಸ್ಥಾಪನೆಗೆ ಎರಡು ಮೂರು ಯುಗಗಳು ಹಿಡಿಸುತ್ತದೆಂದು ತಿಳಿಯುತ್ತಿದೆ. ದ್ವಾಪರಯುಗದ ಕೊನೆಯಲ್ಲಿಯೇ ಅಲ್ಲದೆ ಕಲಿಯುಗದಲ್ಲಿ ಕೂಡಾ ಆ ಕಾರ್ಯ ನಡೆಯುತ್ತದೆಂದು ಅರ್ಥ ಮಾಡಿಕೊಳ್ಳಬಹುದು. ಕೃಷ್ಣನ ಜನ್ಮ ದ್ವಾಪರಯುಗದಲ್ಲಿನದಾಗಿದ್ದು, ಕಲಿಯುಗ ಮೊದಲಿನಲ್ಲಿಯೇ ಎರಡನೇ ಜನ್ಮವಾದ ಯೇಸುವಾಗಿ ಬಂದಿದ್ದಾನೆ. ಇನ್ನೂ ಬರುವಂತಹ ಕಾಲ ಕಲಿಯುಗ ಬಹಳವಿದೆ ಆದ್ದರಿಂದ ದೇವರ ಅವತಾರದಲ್ಲಿನ ಮೂರನೇ ಭಾಗ ಕೂಡಾ ಕಲಿಯುಗದಲ್ಲಿಯೇ ಬರಬಹುದೆಂದು ಹೇಳಬಹುದು. ದೇವರ ಅವತಾರದಲ್ಲಿನ ಎರಡನೇ ಜನ್ಮ ಇಸ್ರಾಯೇಲು ದೇಶದಲ್ಲಿ ನಡೆದು ಇಲ್ಲಿಗೆ ಎರಡು ಸಾವಿರ ವರ್ಷಗಳಾಗಿದೆ. ದ್ವಾಪರಯುಗದ ಕೊನೆಯಲ್ಲಿ ಹುಟ್ಟಿದ ಕೃಷ್ಣನಿಗೆ, ಕಲಿಯುಗದಲ್ಲಿ ಹುಟ್ಟಿದ ಯೇಸುಗೆ ಮೂರು ಸಾವಿರ ವರ್ಷಗಳು ಮಧ್ಯದಲ್ಲಿ ಕಳೆದಿದೆ. ಇನ್ನೂ ಬರುವಂತಹ ದೇವರ ಅವತಾರದಲ್ಲಿ ಮೂರನೇ ಭಾಗವಾದ ಭಗವಂತನ ಜನ್ಮ ಬರಬೇಕಾಗಿದೆ.

ದ್ವಾಪರಯುಗದ ಕೊನೆಯಲ್ಲಿ ಹುಟ್ಟಿದ ಕೃಷ್ಣನು ಭಾರತದೇಶದಲ್ಲಿ ಹುಟ್ಟಿದಾಗ, ಕಲಿಯುಗದಲ್ಲಿ ಹುಟ್ಟಿದ ಯೇಸು ಇಸ್ರಾಯೇಲ್ ದೇಶದಲ್ಲಿ ಹುಟ್ಟುವುದಾಗಿದೆ. ಆದರೆ ಯೇಸು ಮರಣಿಸಿರುವುದು ಭಾರತದೇಶದಲ್ಲಿಯೇ, ಕೃಷ್ಣನು ಮರಣಿಸಿರುವುದು ಭಾರತದೇಶದಲ್ಲಿಯೇ. ಇನ್ನು ಮೂರನೇ ಜನ್ಮವಾಗಿ ಬರುವ ಭಗವಂತನು ಕೂಡಾ ಭಾರತದೇಶದಲ್ಲಿಯೇ ಮರಣಿಸಬೇಕಾಗಿದೆ. ಯೇಸು ಮರಣಿಸದ ಮೊದಲು ನಂತರ ಜನ್ಮವನ್ನು ಭಾರತದೇಶದಲ್ಲಿಯೇ ತೆಗೆದುಕೊಳ್ಳಬೇಕೆಂದು ನಿರ್ಣಯಿಸಿಕೊಂಡಂತೆ ಸ್ವಲ್ಪ ಸಮಾಚಾರ **"ಯೇಸು ಮರಣಿಸಿದ್ದಾನಾ! ಹತವಾಗಿದ್ದಾನಾ?"** ಎನ್ನುವ ಗ್ರಂಥದಲ್ಲಿ ಇರುವುದರಿಂದ ದೇವರ ಮೂರನೇ ಜನ್ಮ ಭಾರತದೇಶದಲ್ಲಿಯೇ ನಡೆಯುತ್ತದೆಂದು ತಿಳಿಯುತ್ತಿದೆ. 'ಯಾವಾಗ' ಎನ್ನುವ ವಿಷಯ ತಿಳಿದಿಲ್ಲ. ಆದ್ದರಿಂದ ನಂತರ ಕಾಲದಲ್ಲಿ ಭಗವಂತನು ಹುಟ್ಟಬಹುದು ಅಥವಾ ಇಂದಿಗೇ ನಡೆದುಹೋಗಿರುವ ಕಾಲದಲ್ಲಿ

ಹುಟ್ಟಿರಬಹುದು. ಆದರೆ ಆತನು ಯಾವಾಗ ಬಂದರೂ ಭೂಮಿ ಮೇಲೆ ಯಾವ ಮಾನವನು ತನ್ನನ್ನು ಗುರುತಿಸಲಾರದ ವಿಧವಾಗಿ ಬರುತ್ತಾನೆ. ಯಾರಿಗಾದರೂ ಈತನು ಭಗವಂತನ ಅವತಾರವೇ ಎಂದು ಒಂದು ಅನುಮಾನ ಬಂದರೂ, ಆತನಲ್ಲಿ ನೂರಾರು ಆಲೋಚನೆಗಳು ಈತನು ದೇವರ ಅವತಾರವಾದ ಭಗವಂತನು ಅಲ್ಲ ಎನ್ನುವಂತೆ ಅನುಮಾನಗಳು ಹುಟ್ಟುತ್ತವೆ. ಆದ್ದರಿಂದ ದೇವರು ಭಗವಂತನಾಗಿ ಎಲ್ಲಿಯೂ ಯಾರಿಂದಲೂ ಗುರುತಿ ಸಲ್ಪಡುವುದಿಲ್ಲ.

**ಪ್ರಶ್ನೆ :– ಇಲ್ಲಿಗೆ ಎರಡು ಅವತಾರಗಳು ಬಂದಿವೆಯೆಂದು ತಿಳಿದಿದೆ. ಎರಡು ಅವತಾರಗಳಲ್ಲಿನ ಬೋಧನೆಗಳು ಎರಡು ದೈವಗ್ರಂಥಗಳಾಗಿ ಬಂದಿವೆ. ಈಗ ಮೂರನೇ ದೈವಗ್ರಂಥ ಯಾವಾಗ ಬಂದರೂ, ಆಗ ದೇವರ ಅವತಾರ ಬಂದಿದೆಯೆಂದು ಸುಲಭವಾಗಿ ಗ್ರಹಿಸಬಹುದು ಅಲ್ಲವೆ!**

**ಉತ್ತರ :–** ಈ ಉಪಾಯ ಇಲ್ಲಿಗೆ ಬಹಳಜನರಲ್ಲಿ ಉಂಟಾಗಿದೆಯೆಂದು ಹೇಳಬಹುದು. ಆದರೆ ಈ ಸಲ ದೇವರು ಅಂತಹ ಅವಕಾಶವನ್ನು ಕೂಡಾ ಯಾರಿಗೂ ಕೊಡಲಿಲ್ಲ. ಏಕೆಂದರೆ! ಕಲಿಯುಗದಲ್ಲಿ ತೃತೀಯ ದೈವಗ್ರಂಥ **"ಅಂತಿಮ ದೈವಗ್ರಂಥ ಎನ್ನುವ"** ಹೆಸರಿನಿಂದ ಇಂದಿಗೇ ಮೂರು ಗ್ರಂಥಗಳು ಬಂದಿವೆ. ಆದರೆ ಅದನ್ನು ಹೇಳಿದವನು ಜಿಬ್ರಯೇಲ್ ಎನ್ನುವ ಗ್ರಹವೆಂದು ನಾವು ಹೇಳಿಕೊಂಡಿದ್ದೇವೆ. ದೇವರ ಮೂರನೇ ಅವತಾರ ಮನುಷ್ಯನ ಆಕೃತಿಯಲ್ಲಿಯೇ ಇರುತ್ತದೆ. ಆದ್ದರಿಂದ ಮೂರನೇ ಗ್ರಂಥವನ್ನು ಕೊಟ್ಟ ಜಿಬ್ರಯೇಲ್ ಖಗೋಳದಲ್ಲಿನ ಗ್ರಹವಾಗಿರುವುದರಿಂದ ಆತನನ್ನು ಭಗವಂತನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅದನ್ನನುಸರಿಸಿ ಮೂರನೇ ದೈವಗ್ರಂಥಕ್ಕು ಭಗವಂತನಿಗು ಸಂಬಂಧವಿಲ್ಲವೆಂದು ತಿಳಿದುಹೋಗಿದೆ. ಆದ್ದರಿಂದ 1400 ವರ್ಷಗಳ ಕೆಳಗೆ ಬಂದಿರುವ ತೃತೀಯ ದೈವಗ್ರಂಥಕ್ಕು ಭಗವಂತನಿಗು ಸಂಬಂಧವಿಲ್ಲ. ಆದ್ದರಿಂದ ಈ ಹದಿನಾಲ್ಕು ನೂರು ವರ್ಷಗಳಲ್ಲಾದರೂ, ಅಥವಾ ಬರುವಂತಹ ಕಾಲದಲ್ಲಿ ಆದರೂ, ದೇವರ ಮೂರನೇ ಅವತಾರ ಬರಬೇಕಾಗಿದೆ.

**ಪ್ರಶ್ನೆ :– ಅಂತಿಮ ದೈವಗ್ರಂಥ ಮೂರನೆ ಗ್ರಂಥವಾಗಿ ಬಂದಿದೆ. ಅದನ್ನು ಭಗವಂತನು ಹೇಳದಿದ್ದರೆ ಅದಕ್ಕೆ ದೈವಗ್ರಂಥವೆಂದು ಹೆಸರು ಹೇಗೆ ಬಂದಿದೆ? ಮೂರನೆ ದೈವಗ್ರಂಥವಾದ ಖುರಾನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಏಕೆ ಹೇಳಿದ್ದಾರೆ?**

**ಉತ್ತರ :–** ಎರಡನೆ ಸಲ ಭಗವಂತನು ಬಂದಾಗ ಹೇಳಿದ ಜ್ಞಾನ ಎರಡು ದೈವಗ್ರಂಥಗಳಾಗಿ ಬಂದಿರುವಮಾತು ನಿಜವೇ. ಆದರೂ ಮೂರನೆ ದೈವಗ್ರಂಥವನ್ನು ಹೇಳಿದವನು ಖಗೋಳ ಗ್ರಹವಾಗಿರುವುದರಿಂದ, ಗ್ರಹಕ್ಕೆ ಮಾನವ ಶರೀರ ಇಲ್ಲದಿರುವುದರಿಂದ ಮೂರನೇ ಗ್ರಂಥವನ್ನು ಹೇಳಿದ ವ್ಯಕ್ತಿ ಭಗವಂತನಲ್ಲವೆಂದು ಹೇಳಬಹುದು. ಆದರೆ ಆ ಗ್ರಂಥಕ್ಕೆ ಮೂರನೇ ದೈವ ಗ್ರಂಥವೆಂದು ಹೆಸರು ಬರುವುದಕ್ಕೆ ಮತ್ತೊಂದು ಕಾರಣ ಇದೆ. ಅದೇನೆಂದರೆ! ಅದೇ ಅಂತಿಮ ದೈವಗ್ರಂಥದಲ್ಲಿಯೇ 42ನೇ ಸೂರಾದಲ್ಲಿ 51ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿರಿ. **(42–50 "ದೇವರು ನೇರವಾಗಿ ಯಾವ ಮಾನವ ನೊಂದಿಗೂ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವೇ ಅಲ್ಲ. ದೇವರು ತನ್ನ ಜ್ಞಾನವನ್ನು ಆಕಾಶವಾಣಿ ಮೂಲಕ (ವಹಿ ಮೂಲಕ) ಆದರೂ ಅಥವಾ ತೆರೆಹಿಂಬದಿಯಿಂದಾದರೂ ಮನುಷ್ಯನಿಗೆ ಸೇರಿಸುತ್ತಾನೆ ಅಥವಾ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ. ಆತನು ಮಹೋನ್ನತನು. ಎಷ್ಟೋ ವಿವೇಕವಂತನು"** ಇಲ್ಲಿ ಹೇಳಿದ ವಾಕ್ಯವನ್ನನುಸರಿಸಿ ದೇವರು ಮನುಷ್ಯನಿಗೆ ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸುತ್ತಾನೆಂದು ತಿಳಿಯುತ್ತಿದೆ.

ದೇವರು ತಿಳಿಸಿದ ಮೂರು ವಿಧಾನಗಳಲ್ಲಿ ಮೊದಲು ಆಕಾಶವಾಣಿ ಯಿಂದ ಶಬ್ದದ ಮೂಲಕ ಜ್ಞಾನ ಸೃಷ್ಟಿ ಆದಿಯಲ್ಲಿಯೇ ಹೇಳಲಾಗಿದೆ. ಸೃಷ್ಟಿ ಆದಿಯಲ್ಲಿ ಮನುಷ್ಯರಿಗೆ ನಾಗರಿಕತೆ ತಿಳಿದಿಲ್ಲ, ಭಾಷೆ ತಿಳಿದಿಲ್ಲ. ಮೇಧಾಶಕ್ತಿ ಇಲ್ಲ. ಆದ್ದರಿಂದ ಮನುಷ್ಯನಿಗೆ ತಿಳಿದ ಭಾಷೆಯಲ್ಲಿ ದೇವರು ತನ್ನ ಜ್ಞಾನವನ್ನು ಹೇಳಲಿಲ್ಲ. ತನ್ನ ಜ್ಞಾನಕ್ಕೆ ಬುನಾದಿ ಹಾಕಿದಂತೆ ಮೊದಲು ಜ್ಞಾನವನ್ನು ಹೇಳಿದರೂ

ಅದು ಆಕಾಶದಲ್ಲಿನ ಗ್ರಹಕ್ಕು, ಭೂತಗಳಿಗು, ಮಹಾಭೂತಗಳಿಗು ತಿಳಿಯುವಂತೆ ದೊಡ್ಡದೊಡ್ಡ ಶಬ್ದಗಳ ರೂಪದಲ್ಲಿ ತಿಳಿಸುವುದಾಗಿದೆ. ಆಕಾಶದಿಂದ ಬಂದ ಶಬ್ದಗಳನ್ನು (ಗುಡುಗುಗಳನ್ನು) ಗ್ರಹಗಳು, ಭೂತಗಳು ಗ್ರಹಿಸಲ್ಪಟ್ಟಿವೆ ಆದರೆ, ಮನುಷ್ಯರಿಗೆ ಆ ಶಬ್ದಗಳ ಅರ್ಥ ಏನೋ ತಿಳಿಯದೆ ಹೋಗಿರುವುದರಿಂದ ಅಂದಿನ ದೈವಭಾವನೆ ಏನೋ ಯಾವ ಮನುಷ್ಯನಿಗೂ ತಿಳಿಯಲಿಲ್ಲ. ಆ ದಿನ ಹೇಳಿದ ಜ್ಞಾನವನ್ನು ದ್ವಾಪರ ಯುಗದ ಕೊನೆಯಲ್ಲಿ ಕೃಷ್ಣನು ವಿವರಿಸಿ ಹೇಳುವುದಾಗಿದೆ. **ದೇವರು ಒಬ್ಬನೇ, ದೇವರ ಜ್ಞಾನ ಒಂದೇ** ಆಗಿರುವುದರಿಂದ ಆಕಾಶವಾಣಿ ಹೇಳಿದ ಜ್ಞಾನವೇ ಎಲ್ಲಿಯಾದರೂ ಹೇಳಲ್ಪಡುತ್ತದೆ ಹೊರತು ಬೇರೆ ಜ್ಞಾನ ಇರುವುದಿಲ್ಲ. ಮೊದಲು ಸೃಷ್ಟಿ ಆದಿಯಲ್ಲಿ ಗುಡುಗುಗಳ ರೂಪದಿಂದ ಹೇಳಿದ ಜ್ಞಾನ ಕೃಷ್ಣನ ಮೂಲಕ ಪ್ರಜೆಗಳಿಗೆ ತಿಳಿಯಲ್ಪಟ್ಟಿದೆ. ಅದೇ ಜ್ಞಾನವೇ ಪ್ರಥಮವಾಗಿ ವ್ಯಾಸನಿಂದ ಗ್ರಂಥವಾಗಿದೆ. ಆದ್ದರಿಂದ ಅದನ್ನು **ಪ್ರಥಮ ದೈವಗ್ರಂಥವೆಂದು** ಹೇಳುವುದಾಗಿದೆ.

ಸೃಷ್ಟಿ ಆದಿಯಲ್ಲಿ ದೇವರು ಹೇಳಿದ ಜ್ಞಾನವೇ ಪ್ರಪಂಚಕ್ಕೆಲ್ಲ ಅಗತ್ಯವಾದ ಜ್ಞಾನ ಆಗಿರುವುದರಿಂದ ಯಾರು ಹೇಳಿದರೂ, ಎಲ್ಲಿ ಹೇಳಿದರೂ ಅದನ್ನು ಹೇಳಬೇಕಾಗಿದ್ದೆ. ಯೇಸುವಿನಿಂದ ಪ್ರಥಮ ದೈವಗ್ರಂಥದಲ್ಲಿನ ಜ್ಞಾನವೇ ಹೇಳಲ್ಪಟ್ಟಿದೆ. ಅದೇ ಬೋಧನೆ ಇಂಜೀಲ್ (ಬೈಬಲ್) ಆಗಿ ಬರೆಯಲ್ಪಟ್ಟಿದೆ. ದೈವಜ್ಞಾನ ಎರಡನೇ ಗ್ರಂಥವಾಗಿ ಬಂದಿರುವುದಕ್ಕೆ ಅದನ್ನು **ದ್ವಿತೀಯ ದೈವಗ್ರಂಥ** ಎಂದು ಕರೆಯುತ್ತಿದ್ದೇವೆ. ಮೊದಲು ಆಕಾಶವಾಣಿಯಿಂದ ಹೇಳಲ್ಪಟ್ಟಿರುವುದು ಮೊದಲು ಪ್ರಥಮ ದೈವಗ್ರಂಥವಾಗಿದೆ, ನಂತರ ಅದೇ ದ್ವಿತೀಯ ದೈವಗ್ರಂಥ ವಾಗಿದೆ. ಪ್ರಥಮ ದೈವಗ್ರಂಥದಲ್ಲಿನ ಜ್ಞಾನವನ್ನೇ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳುವುದರಿಂದ ಅದೇ ಜ್ಞಾನವೇ **ತೃತೀಯ ದೈವಗ್ರಂಥವಾಗಿ** ಬರೆಯಲ್ಪಟ್ಟಿದೆ. ತೃತೀಯ ದೈವಗ್ರಂಥ ಖುರ್‌ಆನ್ ಎಂದು ಹೇಳುವುದಾಗಿದೆ.

**ಪ್ರಶ್ನೆ :- ಖುರ್‌ಆನ್‌ನನ್ನು ತೃತೀಯ ದೈವಗ್ರಂಥವೆಂದು ಅನ್ನದಂತೆ ಅಂತಿಮ ದೈವಗ್ರಂಥವೆಂದು ಮುಸ್ಲಿಮ್‌ರು ಎಲ್ಲರೂ ಕರೆಯುತ್ತಿದ್ದರು. ಹಾಗೆ ಕರೆಯುವುದಕ್ಕೆ ಕಾರಣವೇನಾದರೂ ಇದೆಯಾ?**

**ಉತ್ತರ :-** ಈ ವಿಷಯವನ್ನು ನಾನು ಮುಸ್ಲಿಮ್ ಹಿರಿಯರನ್ನು ಕೇಳಿದ್ದೇನೆ. ಅದಕ್ಕೆ ಅವರು ಸಮಾಧಾನ ಹೇಳಿದ್ದಾರೆ. ಆದರೆ ಅದು ಅವರ ಭಾವನೆಯೇ ಹೊರತು, ಅದು ಶಾಸ್ತ್ರಬದ್ಧವಾದ ಉತ್ತರವಲ್ಲ. ಹೇತುಬದ್ದವಾದ ವಿವರಣೆಯಲ್ಲ. ಖುರ್‌ಆನ್ ನಂತರ ಬೇರೆ ದೈವಗ್ರಂಥ ಬರುವುದಿಲ್ಲ, ಮುಂಬರುವ ಕಾಲ ದಲ್ಲಿಯೂ ಬರುವುದಿಲ್ಲ. ಆದ್ದರಿಂದ ಇದೇ ಅಂತಿಮ ದೈವಗ್ರಂಥವೆಂದು ಹೇಳುತ್ತಿದ್ದೇವೆಂದು ಹೇಳಿದ್ದಾರೆ. ಪ್ರಥಮ ದೈವಗ್ರಂಥದಲ್ಲಿ **"ಕಾಲಕ್ರಮವಾಗಿ ಜ್ಞಾನ ನಶಿಸಿ, ಧರ್ಮಗಳು ಬಲಹೀನವಾಗಿ ಅಧರ್ಮಗಳು ವಿಜೃಂಭಿಸಿದಾಗ, ಅಜ್ಞಾನ ಮನುಷ್ಯರಲ್ಲಿ ತುಂಬಿ ಹೋದಾಗ ಬರುವಂತಹ ಯುಗಗಳಲ್ಲಿ ಕೂಡಾ ಧರ್ಮಪ್ರತಿಷ್ಟಾಪನೆಗೆ ಬರುತ್ತೇನೆಂದು"** ಹೇಳಿರುವ ಮಾತನ್ನು ಮರೆತುಹೋಗ ಬಾರದು. ಮೊದಲು ಪ್ರಥಮ ದೈವಗ್ರಂಥ ತಯಾರಾಗಿದೆ. ನಂತರ ಉಳಿದ ಎರಡು ದೈವಗ್ರಂಥಗಳು ತಯಾರಾಗಿವೆ. ಆದರೆ ಆ ಎರಡು ಗ್ರಂಥಗಳು ಮೊದಲು ತಯಾರಾದ ಭಗವದ್ಗೀತೆ ಜ್ಞಾನವನ್ನು ಅನುಸರಿಸಿಯೇ ಇರುತ್ತವೆಂದು ದೇವರು ತನ್ನ ಬೋಧನೆಯಲ್ಲಿ ಬಹಳಸಲ ತಿಳಿಸಿದ್ದಾನೆ. ಅದೇ ವಿಷಯವನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ ಕೂಡಾ ಹೇಳಿದ ವಾಕ್ಯಗಳನ್ನು ಕ್ರಮವಾಗಿ ನೋಡೋಣ.

**(5-48) "ನಾವು ನಿನ್ನ ಕಡೆಗೆ ಈ ಗ್ರಂಥವನ್ನು (ಖುರ್‌ಆನ್‌ನನ್ನು) ಸತ್ಯ ಸಮೇತವಾಗಿ ತಯಾರುಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ (ಮನುಷ್ಯರ) ಮನೋವಾಂಛೆಗಳನ್ನು ಅನುಸರಿಸಬೇಡ."**

**(5-44) "ನಾವು ತೌರಾತ್ ಗ್ರಂಥವನ್ನು ತಯಾರುಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶಕ, ಜ್ಯೋತಿ ಇವೆ. ಈ ತೌರಾತ್ ಗ್ರಂಥ ಆಧಾರವಾಗಿಯೇ ಮುಸ್ಲಿಮ್‌ರಾದ ಪ್ರವಕ್ತರು ರಬ್ಬಾನೀಗಳು, ಧರ್ಮವೇತ್ತರು ಯೂದರ ಸಮಸ್ಯೆಗಳನ್ನು ಪರಿಷ್ಕರಿಸುವವರು."**

**(5–68)" ಓ ಗ್ರಂಥವಾಹಕರೇ! ತೌರಾತ್‌ನನ್ನು, ಇಂಜೀಲ್‌ನನ್ನು (ಭಗವದ್ಗೀತೆ, ಬೈಬಲ್‌ನನ್ನು) ನಿಮ್ಮ ಪ್ರಭುವಿನಿಂದ ನಿಮ್ಮ ಹತ್ತಿರಕ್ಕೆ ಕಳಿಸಿರುವುದನ್ನು (ಖುರ್‌ಆನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮಗಳ ಮೇಲೆ ಇಲ್ಲದಂತೆಯೇ."**

**(62–5) "ತೌರಾತು ಗ್ರಂಥದ ಪ್ರಕಾರ ಆಚರಿಸಬೇಕೆಂದು ಆದೇಶಿಸಿದರೂ, ಅದಕ್ಕೆ ಅನುಗುಣವಾಗಿ ಆಚರಿಸದವರು ಎಷ್ಟು ಗ್ರಂಥಗಳನ್ನು ಅನುಸರಿಸಿದರೂ, ಅಂತಹವರನ್ನು ಎಷ್ಟೋ ಗ್ರಂಥಗಳು ಬೆನ್ನಿನಮೇಲೆ ಹೊರುವ ಕತ್ತೆಯಂತವರೆಂದು ಉದಾಹರಣೆಯಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ಅಲ್ಲಾಹ್ ಸನ್ಮಾರ್ಗವನ್ನು ತೋರಿಸುವುದಿಲ್ಲ."**

ಇಲ್ಲಿ ಹೇಳಿದ ವಾಕ್ಯಗಳಲ್ಲಿ ತೌರಾತ್ ಗ್ರಂಥವನ್ನೇ ಈಗ ನಾವು ಭಗವದ್ಗೀತೆಯಾಗಿ ಹೇಳುತ್ತಿದ್ದೇವೆ. ತೌರಾತ್‌ಗು ಭಗವದ್ಗೀತೆಗು ಏನು ಸಂಬಂಧ ವೆಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ತಿಳಿಯಬೇಕೆಂದರೆ ನಾವು ಬರೆದ **"ಅಂತಿಮ ದೈವಗ್ರಂಥದಲ್ಲಿನ ಜ್ಞಾನ ವಾಕ್ಯಗಳು (ಎರಡನೆ ಭಾಗ)"** ಎನ್ನುವ ಗ್ರಂಥವನ್ನು ನೋಡಬೇಕು. ಅದರಲ್ಲಿ 'ತೌರಾತ್' ಎಂದರೇ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯೆಂದು ವಿವರ ಇದೆ. ದೇವರ ಜ್ಞಾನ ದ್ವಾಪರ ಯುಗದಲ್ಲಿ ಭಗವದ್ಗೀತೆಯಾಗಿ, ಕಲಿಯುಗದಲ್ಲಿ ಬೈಬಲ್, ಖುರಾನಾಗಿ ಹೊರಬಂದಿದೆ. ಈ ಮೂರು ಗ್ರಂಥಗಳಲ್ಲಿರುವುದು ಒಂದೇ ದೈವಜ್ಞಾನ ವಾಗಿರುವುದರಿಂದ ಮೂರನ್ನು ದೈವಗ್ರಂಥಗಳೆಂದು ಹೇಳುವುದಾಗಿದೆ. ತಯಾರಾದ ವರಸೆಕ್ರಮವನ್ನು ಅನುಸರಿಸಿ ಪ್ರಥಮ, ದ್ವಿತೀಯ, ತೃತೀಯ ದೈವಗ್ರಂಥಗಳಾಗಿ ಹೇಳುತ್ತಿದ್ದರೂ ದೇವರು ತನ್ನ ಜ್ಞಾನವನ್ನು ತಿಳಿಸುವ ಮೂರು ವಿಧಾನಗಳಲ್ಲಿ ಕೊನೆಯದಾಗಿ ನೀಡಿರುವುದಾಗಿರುವುದರಿಂದ ಇದನ್ನು "ಅಂತಿಮ ದೈವಗ್ರಂಥ" ಎಂದು ಹೇಳಬೇಕಾಗಿ ಬಂದಿದೆ. ದೇವರು ಖುರ್‌ಆನ್‌ನಲ್ಲಿ ಹೇಳಿದ ಪ್ರಕಾರ ಒಂದು ಆಕಾಶವಾಣಿ ಮೂಲಕ ಜ್ಞಾನವನ್ನು ತಿಳಿಸುವುದು, ಎರಡು

ತೆರೆಹಿಂಬದಿಯಿಂದ ಹೇಳುವುದು, ಮೂರು ತನ್ನ ಪ್ರತಿನಿಧಿಯಿಂದ ಜ್ಞಾನವನ್ನು ತಿಳಿಸುವುದೆಂದು ಹೇಳಿರುವಾಗ, 'ಆಕಾಶವಾಣಿ ಮೂಲಕ ತಿಳಿಸಿದ ಜ್ಞಾನ' ಎನ್ನುವ ವಿಧಾನ ಮೊದಲೇ ನಡೆದುಹೋಗಿದೆ. ಹಾಗೆ ಹೇಳಲ್ಪಟ್ಟ ಜ್ಞಾನ ಮೊದಲು ಗ್ರಂಥವಾಗಿ ತಯಾರಾಗಿದೆ. ನಂತರ ಎರಡನೆ ಗ್ರಂಥ ತಯಾರಾಗಿದೆ. ಮೂರನೆ ಗ್ರಂಥವಾದ ಖುರ್‌ಆನ್ ಕೊನೆಯಲ್ಲಿ ತಯಾರಾಗಿದೆ, ಆದ್ದರಿಂದ ಅದನ್ನು ಎಂದಿಗೂ ಕೊನೆಯ ಗ್ರಂಥವೆಂದು, ಅಂತಿಮ ದೈವಗ್ರಂಥವೆಂದು ಹೇಳುವುದು ನಡೆದಿದೆ. ತಯಾರಾದ ಕ್ರಮವನ್ನನುಸರಿಸಿ ಹೇಳಲ್ಪಡುವುದಲ್ಲದೆ ದೇವರು ಹೇಳಿದ ಮೂರು ವಿಧಾನಗಳಲ್ಲಿ ಆಕಾಶವಾಣಿ ಮೂಲಕ ಹೇಳಿರುವುದು ಮೊದಲು ನಡೆದುಹೋಗಿದೆ, ತನ್ನ ಪ್ರತಿನಿಧಿಯಾದ ಮನುಷ್ಯನ ಮೂಲಕ ಹೇಳಿರುವುದು ಎರಡನೆಸಲ ನಡೆದುಹೋದಾಗ, ಕೊನೆಯದಾಗಿ ನಡೆದಿರುವುದು ತೆರೆಹಿಂಬದಿಯಿಂದ ಹೇಳಿರುವುದು. ಕೊನೆಯದಾಗಿ ತೆರೆಹಿಂಬದಿಯಿಂದ ಜಿಬ್ರಯೇಲ್ ಗ್ರಹ ಹೇಳಿದಾಗ ಮುಹಮ್ಮದ್ ಪ್ರವಕ್ತರವರು ಕೇಳಿ ಅದನ್ನೇ ಗ್ರಂಥರೂಪವಾಗಿ ಮಾಡುವುದರಿಂದ ಅದು ಕೊನೆಯ ಗ್ರಂಥವಾಗಿದೆ.

ದೈವಪ್ರತಿನಿಧಿಯಾಗಿ ಕೃಷ್ಣನು ಬಂದು ಜ್ಞಾನವನ್ನು ಹೇಳಿದ್ದಾನೆ ಅದೇ ಭಗವದ್ಗೀತೆ. ಹಾಗೆಯೇ ದೈವಪ್ರತಿನಿಧಿ ಎರಡನೆಸಲ ಬಂದು ದೈವಜ್ಞಾನವನ್ನು ಹೇಳಿದ್ದಾನೆ ಅದೇ ಸುವಾರ್ತೆ ಬೈಬಲ್. ಆದರೇ ಖುರ್‌ಆನ್ ವಿಷಯದಲ್ಲಿ ದೈವಪ್ರತಿನಿಧಿ ಬರಲಿಲ್ಲ. ಆದುದರಿಂದ ದೈವಪ್ರತಿನಿಧಿ ತಪ್ಪದೆ ಬರಬೇಕಾಗಿದೆ. ದೈವ ಪ್ರತಿನಿಧಿಯಾದ ಭಗವಂತನು ಮೂರುಸಲ ಭೂಮಿಮೇಲಕ್ಕೆ ಬಂದರೆ ಆಗ ದೈವ ಅವತಾರ ಒಂದುಸಲ ಪೂರ್ತಿ ಆದಂತಾಗುತ್ತದೆ. ದೈವಪ್ರತಿನಿಧಿಗಳಾಗಿ ಒಂದುಸಲ ಕೃಷ್ಣನು, ಎರಡನೆಸಲ ಯೇಸು ಬಂದಿದ್ದಾರೆಂದು ತಿಳಿಯುತ್ತಿದೆ. ಇನ್ನು ಮೂರನೆ ಪ್ರತಿನಿಧಿಯಾಗಿ ಶರೀರ ಧರಿಸಿ ಬರುವವನು 'ಆದರಣಕರ್ತ ಯೆಂದು' ಸ್ವಲ್ಪಮಟ್ಟಿಗೆ ತಿಳಿದಿದೆ. ಮೊದಲ ಪ್ರತಿನಿಧಿಯಾದ ಕೃಷ್ಣಭಗವಾನ್ ಮರಣಿಸುವಾಗ ತನ್ನ ಎರಡನೆ ಜನ್ಮ ಯೇಸು ಆಗಿ ಬರುತ್ತೇನೆಂದು ಹೇಳಿದ್ದಾನೆ. ಹಾಗೆಯೇ ಯೇಸು ತಾತ್ಕಾಲಿಕ ಮರಣವನ್ನು ಹೊಂದುವ ಸಮಯಕ್ಕಿಂತ

ಮೊದಲು ತನ್ನ ಶಿಷ್ಯರೊಂದಿಗೆ ಕಲೆತಿರುವ ಕೊನೆಯ ಬೇಟಿಯಲ್ಲಿ ತಾನು ನಂತರ ಜನ್ಮದಲ್ಲಿ ಆದರಣಕರ್ತನಾಗಿ ಬರುತ್ತೇನೆಂದು ಹೇಳಿದ್ದಾನೆ. ಈ ವಿಧವಾಗಿ ಮೊದಲ ಜನ್ಮ ನಂತರ ಉಳಿದ ಎರಡು ಜನ್ಮಗಳು ಸ್ವಲ್ಪ ಸೂಚನೆಯಾಗಿ ಹೇಳಲ್ಪಟ್ಟಿವೆ. ಮೊದಲ ದೈವಪ್ರತಿನಿಧಿಯಾದ ಕೃಷ್ಣಭಗವನ್‌ರ ಮೂಲಕ ಎರಡನೆ ಬರುವಿಕೆ ಯೇಸುವಾಗಿ ಬರುತ್ತಾನೆಂದು ತಿಳಿದಿದೆ. ಎರಡನೆಯ ಪ್ರತಿನಿಧಿಯಿಂದ ಮೂರನೆ ಬರುವಿಕೆ ಆದರಣಕರ್ತನಾಗಿ ಬರುತ್ತಾನೆಂದು ತಿಳಿದಿದೆ. ಆದರಣಕರ್ತ ಬಂದರೆ ಒಂದುಸಲ ದೇವರ ಅವತಾರ ಪೂರ್ತಿ ಆದಂತಾಗುತ್ತದೆ.

ಭೂಮಿಮೇಲೆ ಪೂರ್ತಿ ಧರ್ಮಸಂಸ್ಥಾಪನೆ ನಡೆಯಬೇಕೆಂದರೆ, ಅಧರ್ಮಗಳು ಇಲ್ಲದಂತೆ ಹೋಗಬೇಕೆಂದರೆ ದೇವರು ಒಂದುಸಲ ಅವತರಿಸಬೇಕು. ದೇವರ ಅವತಾರ ಪೂರ್ತಿ ಆಗುವುದಕ್ಕೆ ಭಗವಂತನು ಮೂರುಸಲ ಹುಟ್ಟಬೇಕು. ಮೂರುಸಲ ಭಗವಂತನು ಭೂಮಿಮೇಲಕ್ಕೆ ಬಂದರೆ ಆಗ ದೇವರು ಒಂದುಸಲ ಅವತರಿಸಿದಂತಾಗುತ್ತದೆ. ಆಗ ಸ್ವಲ್ಪಸ್ವಲ್ಪವಾಗಿ ಅಧರ್ಮಗಳು ಅಡಕವಾಗುವುದಕ್ಕೆ ಮೊದಲುಮಾಡುತ್ತವೆ. ಅಧರ್ಮಗಳು ಅಡಕವಾದಂತೆಲ್ಲ ಧರ್ಮಗಳ ವೃದ್ಧಿ ನಡೆಯುತ್ತಾ ಬರುತ್ತದೆ. ಈ ವಿಧವಾಗಿ ಸ್ವಲ್ಪಕಾಲಕ್ಕೆ ಅಧರ್ಮಗಳು ಪೂರ್ತಿಯಾಗಿ ರೂಪಬದಲಾಗಿ, ಧರ್ಮಪ್ರತಿಷ್ಠಾಪನೆ ಪೂರ್ತಿಯಾಗಿ ನಡೆಯುತ್ತದೆ. ಇದೆಲ್ಲವೂ ಯಾರಿಗೂ ತಿಳಿಯದಂತೆಯೇ ನಡೆಯುತ್ತದೆ. ದೇವರು ಪ್ರತ್ಯಕ್ಷವಾಗಿ ಕಾಣಿಸಿ ಧರ್ಮಗಳನ್ನು ಪ್ರತಿಷ್ಠಿಸುವುದು ಏನೂ ಇಲ್ಲ ಆದರೆ, ಅವುಗಳಷ್ಟಕ್ಕವೇ ನಡೆದುಹೋದಂತೆ ತಿಳಿಯುತ್ತದೆ. ದೇವರ ಅವತಾರ ಮೂವರು ಭಗವಂತರಾಗಿ ಬಂದಾಗ ಪೂರ್ತಿಯಾಗುತ್ತದೆ. ಆಗ ಮೂರು ಅವತಾರಗಳಲ್ಲಿ ಧರ್ಮಗಳನ್ನು ಬೋಧಿಸುವುದು ನಡೆಯುತ್ತದೆ. ಕೊನೆಯ ಜನ್ಮದಲ್ಲಿ ಭಗವಂತನ ಬೋಧನೆಗಳು ಹೆಚ್ಚಾಗಿರುತ್ತವೆ. ಆದ್ದರಿಂದ ಕೊನೆಯ ಅವತಾರ ಎಂದರೆ ಮೂರನೆ ಅವತಾರ ನಡೆದ ನಂತರ ಧರ್ಮಪ್ರತಿಷ್ಠಾಪನೆ, ಅಧರ್ಮಗಳ ನಿರ್ಮೂಲನೆ ಹೆಚ್ಚಾಗಿ ಕಾಣಿಸುತ್ತದೆ.

ಇಲ್ಲಿ ಎರಡುಸಲ ಭಗವಂತನು ಭೂಮಿಮೇಲಕ್ಕೆ ಬಂದುಹೋಗಿದ್ದಾನೆ. ಒಂದುಸಲ ಕೃಷ್ಣನಾಗಿ ಬಂದರೆ, ಎರಡನೆಸಲ ಯೇಸುವಾಗಿ ಬಂದಿದ್ದಾನೆ. ಬಂದವನು ಒಬ್ಬನೇ ಆದರೂ ಇಬ್ಬರಾಗಿ ಬೇರೆಬೇರೆ ಜನ್ಮಗಳಾಗಿ, ಹೋಲಿಕೆ ಇಲ್ಲದ ಜನ್ಮಗಳಾಗಿ ಕಾಣಿಸುವುದರಿಂದ ಇಬ್ಬರೂ ಒಬ್ಬರೇಯೆಂದು ಯಾರೂ ಗುರುತಿಸಲಿಲ್ಲ. ಆದ್ದರಿಂದ ಕೃಷ್ಣನ ಜನ್ಮ, ಯೇಸು ಜನ್ಮ ಎರಡು ಉತ್ತರ ದಕ್ಷಿಣಗಳಾಗಿ ಇವೆ. ಎಷ್ಟು ಮೇಧಾಶಕ್ತಿ ಇರುವವರಾದರೂ ಅವರಿಬ್ಬರೂ ಒಂದೇಯೆಂದು ಗುರುತಿಸಲಾರರು. ಬರುವಂತಹ ಜನ್ಮ ಕೂಡಾ ಈ ಎರಡು ಜನ್ಮಗಳೊಂದಿಗೆ ಸಂಬಂಧ ಇಲ್ಲದಂತಿರುತ್ತದೆ. ಮೂರನೆ ಜನ್ಮವಾಗಿ ದೇವರು ಯಾವಾಗ ಬಂದರೂ ಸ್ವಲ್ಪವೂ ಗುರುತಿಸದಂತೆ ಇರುತ್ತಾನೆ. ಇದು ಭಗವಂತನ ಜನ್ಮಯೆಂದು ಯಾರೂ ಗುರುತಿಸಲಾರರು. ಆದರೆ ಈ ಸಲ ಭಗವಂತನ ಜನ್ಮ ನಡೆದರೆ ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಅನೇಕವಾಗಿ ವಿವರಿಸಿ ಹೇಳುತ್ತಾನೆ. ಮೂರನೆಸಲ ಬಂದಿರುವ ಭಗವಂತನು ಗತದಲ್ಲಿ ಎರಡುಸಲ ಹೇಳಿದ ಜ್ಞಾನಕ್ಕಿಂತ ಹೆಚ್ಚಾಗಿ ವಿವರಣೆ ಇರುವ ಜ್ಞಾನವನ್ನು ಬೋಧಿಸುತ್ತಾನೆ. ಇಂದಿಗೆ ಎರಡುಸಲ ಭಗವಂತನು ಬಂದುಹೋಗುವುದು ನಡೆದಿದೆ. ಆದರೂ ಅಧರ್ಮಗಳು ಕದಲದಂತಿವೆ. ಸಂಪೂರ್ಣವಾಗಿ ಅಧರ್ಮಗಳನ್ನು ನಿರ್ಮೂಲಿಸುವುದಕ್ಕೆ ದೇವರು ತಪ್ಪದೆ ಬರಬೇಕಾಗಿದೆ. ಆದ್ದರಿಂದ **"ಇದು ದೇವರ ಬರುವಿಕೆಗೆ ಸಮಯವಲ್ಲವೇ!"** ಎಂದು ನಾನು ಕೇಳುತ್ತಿದ್ದೇನೆ.

ಜಿಬ್ರಯೇಲ್ ಗ್ರಹ ತೆರೆಹಿಂಬದಿಯಿಂದ ದೇವರು ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತರಿಗೆ ಹೇಳಿದರೂ, ಹೇಳಿರುವುದು ಕೊನೆಯ ಗ್ರಂಥವಾದರೂ ನಂತರ ಜ್ಞಾನ ಇನ್ನು ಬರುವುದಿಲ್ಲ, ಇದೇ ಕೊನೆಯ ಜ್ಞಾನ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಮೂರು ದೈವಗ್ರಂಥಗಳು ಭೂಮಿಮೇಲೆ ಇದ್ದರೂ ಇಲ್ಲಿಯೇ ಅಜ್ಞಾನ, ಅಧರ್ಮಗಳು ಮಿತಿಮೀರಿ ಇವೆ. ಅವುಗಳ ನಿರ್ಮೂಲನೆಗೆ ಮೂರನೆಸಲ ದೇವರು ಭಗವಂತನಾಗಿ ಬಂದರೆ ಗತದಲ್ಲಿ ಹೇಳಿದ ಜ್ಞಾನಕ್ಕಿಂತ ಹೆಚ್ಚು ವಿವರವಾಗಿ ಜ್ಞಾನ ತಿಳಿಯುತ್ತದೆಂದು ಹೇಳಿದ್ದಾನೆ.

ಆದ್ದರಿಂದ ಅಂತಿಮ ದೈವಗ್ರಂಥದ ನಂತರ ಕೂಡಾ ವಿಶೇಷವಾದ ಜ್ಞಾನ, ವಿಜ್ಞಾನದಾಯಕವಾದ ಜ್ಞಾನ, ಜ್ಞಾನಮಾರ್ಗದಲ್ಲಿ ಪ್ರತಿ ವಿಷಯಕ್ಕು ಒಳ್ಳೆಯ ವಿವರಣೆ ಇರುವ ಜ್ಞಾನ ಲಭಿಸುತ್ತದೆ. ಆದರೆ ಅವುಗಳಿಗೆ 'ದೈವಗ್ರಂಥ' ಎನ್ನುವ ಹೆಸರಿರುವುದಿಲ್ಲ. ಮೂರನೆ ಭಗವಂತನನ್ನು ಕಂಡುಹಿಡಿಯುವುದಕ್ಕೆ ಸಾಧ್ಯವಿಲ್ಲದೆ ಕೊನೆಯ ದೈವಗ್ರಂಥವನ್ನು ಮೊದಲೇ ಭೂಮಿಮೇಲೆ ಬರುವಹಾಗೆ ದೇವರು ಮಾಡಿದ್ದಾನೆ. ಅಲ್ಲಿಗೆ ದೇವರನ್ನು ತಿಳಿಸುವ ಜ್ಞಾನ ವಿಧಾನಗಳು ಮೂರು ಮುಗಿದುಹೋಗುವುದರಿಂದ ನಂತರ ದೈವಜ್ಞಾನ ಗ್ರಂಥಗಳು ಯಾವು ಬಂದರೂ, ಎಷ್ಟು ಬಂದರೂ ಅವುಗಳಿಗೆ 'ದೈವಗ್ರಂಥ' ಎನ್ನುವ ವರಸಕ್ರಮ ಇರುವುದಿಲ್ಲ. ಇಂತಹ ವಿಧಾನ ಇರುವುದರಿಂದ ಮೂರನೆಸಲ ಬರುವ ಭಗವಂತನನ್ನು ಯಾರೂ ಗುರುತಿಸಲಾರರು. ಯಾವಾಗ ಭಗವಂತನು ಬಂದರೂ ಸೃಷ್ಟಿ ಆದಿಯಲ್ಲಿನ ಜ್ಞಾನವನ್ನೇ ಬೋಧಿಸುತ್ತಾನೆಂದು ಗುರುತಿಸಿಕೊಳ್ಳಬೇಕು.

**ಪ್ರಶ್ನೆ :– ಪ್ರಪ್ರಥಮವಾಗಿ ಸೃಷ್ಟಿ ಆದಿಯಲ್ಲಿ ಬಂದಿರುವ ಜ್ಞಾನವನ್ನು ಸೂರ್ಯನು ಭೂಮಿಮೇಲಿರುವ ಮನುವಿಗೆ ತಿಳಿಸಿದ್ದಾನೆಂದು, ನೀವೇ ಹೇಳಿದಾಗ ಕೇಳಿದ್ದೇವೆ. ಉಳಿದವರು ಕೂಡಾ ಅದೇ ಹೇಳುತ್ತಿದ್ದಾರೆ. ಆದರೆ ಜಿಬ್ರಯೇಲ್ ಎನ್ನುವಾತನು 1400 ವರ್ಷಗಳ ಪೂರ್ವದಲ್ಲಿ ಮುಹಮ್ಮದ್ ಪ್ರವಕ್ತರವರಿಗೆ ಖುರಾನ್‌ನನ್ನು ಹೀರಾ ಗುಹೆಗಳಲ್ಲಿ ಹೇಳಿದ್ದಾನೆ ಎಂದು ಕೇಳಿದ್ದೇವೆ. ಎಲ್ಲರ ಭಾವನೆಯಲ್ಲಿ ಜಿಬ್ರಯೇಲ್ ಒಬ್ಬ ದೇವದೂತಯೆಂದು ಇದೆ. ಆದರೇ ಆತನು ದೇವದೂತ ಅಲ್ಲ ಎಂದು ಖುರಾನ್ ಗ್ರಂಥದಲ್ಲಿಯೇ (2–97), (2–98), (26–193), (70–4), (78–38), (97–4) ಆಯತ್‌ಗಳಲ್ಲಿ ಇದೆ. ನೀವೇನೊ ಜಿಬ್ರಯೇಲ್ ಮಹಾಜ್ಞಾನಿ ಎಂದು ಹೇಳಿದ್ದೀರ. ಅಷ್ಟೇ ಅಲ್ಲದೆ ಕೆಲವುಕಡೆ ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಸೂರ್ಯನಿಗೆ ಹೇಳಿದ ಜ್ಞಾನವನ್ನು ಸೂರ್ಯನ ಮೂಲಕ ಜಿಬ್ರಯೇಲ್ ಕೇಳಿದ್ದಾನೆಂದು ಒಂದುಕಡೆ ಹೇಳಿದ್ದೀರ. ಮತ್ತೊಂದು ಕಡೆ ಸೂರ್ಯನಿಗೆ ಆಕಾಶವಾಣಿ ಹೇಳುವಾಗಲೇ ಜಿಬ್ರಯೇಲ್ ಕೂಡಾ ಕೇಳಿದ್ದಾನೆಂದು ಹೇಳಿದ್ದೀರ. ನೀವು ಜಿಬ್ರಯೇಲ್ ವಿಷಯದಲ್ಲಿ ಎರಡು ವಿಧಗಳಾಗಿ ಹೇಳಿದಾಗ**

**ನಾವು ಆ ವಿಷಯವನ್ನು ಕುರಿತು ಪ್ರಶ್ನಿಸಿ ಕೇಳಿದ್ದೇವೆ. ಜಿಬ್ರಯೇಲ್ ಸೃಷ್ಟಿ ಆದಿಯಲ್ಲಿನ ಜ್ಞಾನವನ್ನು ಆಕಾಶವಾಣಿ ಹೇಳಿದಾಗಲೇ ಸೂರ್ಯನೊಂದಿಗೆ ಕೇಳಿದ್ದಾನಾ ಅಥವಾ, ತದನಂತರ ಸೂರ್ಯನ ಮೂಲಕ ಕೇಳಿದ್ದಾನಾ ಎಂದು ಕೇಳಿದ್ದೇವೆ. ಆಗ ಸತ್ಯವನ್ನೇ ಹೇಳುತ್ತೇವೆಂದು ಹೇಳಿದ್ದೀರ ಆದರೆ ಇಲ್ಲಿಯವರೆಗು ಅಲ್ಲಿರುವ ಸತ್ಯವೇನೊ ನೀವು ವಿವರಿಸಿ ಹೇಳಲಿಲ್ಲ. ಆದ್ದರಿಂದ ನಾವು ಈಗ ಜಿಬ್ರಯೇಲ್‌ಗೆ ದೈವಜ್ಞಾನ ಹೇಗೆ ತಿಳಿದಿದೆ, ಯಾವಾಗ ತಿಳಿದಿದೆ? ಜಿಬ್ರಯೇಲ್ ಮಹಾಜ್ಞಾನಿ ಹೇಗೆ ಆಗಿದ್ದಾನೆ? ಎಂದು ಕೇಳುತ್ತಿದ್ದೇವೆ.**

**ಉತ್ತರ :–** ಕೆಲವು ವಿಷಯಗಳನ್ನು ಕೂಡಲೇ ಹೇಳಬಾರದು. ಇನ್ನೊಬ್ಬ ವ್ಯಕ್ತಿ ಸತ್ಯವನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯ ಹೊಂದಿದಾಗಲೇ ಹೇಳಬೇಕಾಗಿರುತ್ತದೆ. ಆದುದರಿಂದ ಕೆಲವು ವಿಷಯಗಳನ್ನು ಅನುಕೂಲ ಇರುವಾಗ, ಅವಕಾಶ ವನ್ನನುಸರಿಸಿ ಸಮಯ ಸಂದರ್ಭವನ್ನನುಸರಿಸಿ ಹೇಳುತ್ತಿರುತ್ತೇವೆ. ಜಿಬ್ರಯೇಲ್ ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಹೇಳಿದ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತರಿಗೆ ಹೇಳಿದ್ದಾನೆ. ಆದರೆ ಸೃಷ್ಟಿ ಆದಿಯಲ್ಲಿನ ಜ್ಞಾನವನ್ನು ಸೂರ್ಯನ ನಂತರ ಜಿಬ್ರಯೇಲ್‌ಗೆ ಮಾತ್ರ ತಿಳಿದಿದೆ ಎಂದು ಹೇಳಿಕೊಂಡಿದ್ದೇವೆ. ಸೂರ್ಯನು ಕೃತಯುಗದಲ್ಲಿ ಮೊದಲು ಮನುವಿಗೆ ಹೇಳಿದ ಜ್ಞಾನವನ್ನೇ, ಕಲಿಯುಗದಲ್ಲಿ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳುವುದಾಗಿದೆ. ಆದರೆ ಸೂರ್ಯನು ಖಗೋಳದಲ್ಲಿ ಒಂದು ಗ್ರಹವಾಗಿದ್ದು, ಜಿಬ್ರಯೇಲ್ ಕೂಡಾ ಸೂರ್ಯನಂತೆ ಖಗೋಳದಲ್ಲಿ ಒಂದು ಗ್ರಹವಾಗಿ ಇದ್ದಾನೆ. ಸೂರ್ಯನು ಕೇಳಿದಾಗಲೇ ಜಿಬ್ರಯೇಲ್ ಕೂಡಾ ಕೇಳಿದ್ದಾನೆ. ಇಲ್ಲಿ ಚೆನ್ನಾಗಿ ಗಮನಿಸಿದರೆ ದೇವರು ಆಕಾಶವಾಣಿ ಮೂಲಕ ಸೂರ್ಯನಿಗೆ ಜ್ಞಾನ ಹೇಳಿದ್ದಾನೆಂದು ಹೇಳಿದ್ದಾನೇ ಹೊರತು, ಅಲ್ಲಿ ಜಿಬ್ರಯೇಲ್‌ಗೂ ಸಹ ಹೇಳಿದ್ದೇನೆಂದು ಹೇಳಲಿಲ್ಲ ಅಲ್ಲವೆ! ಹಾಗಿರುವಾಗ ಸೂರ್ಯನು ಒಬ್ಬನೇ ಕೇಳಿರಬಹುದು ಆದರೆ ಜಿಬ್ರಯೇಲ್ ಕೇಳುವುದಕ್ಕೆ ಅವಕಾಶವಿಲ್ಲ. ಹಾಗಿರುವಾಗ ಜಿಬ್ರಯೇಲ್ ಕೇಳಿದ್ದಾನೆ ಎನ್ನುವ ಮಾತು ಅಸತ್ಯವಲ್ಲವೇ ಎಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಉತ್ತರ ಏನೆಂದರೆ!

ಸೂರ್ಯನು ಒಬ್ಬನೇ ಕೇಳಿದಮಾತು ವಾಸ್ತವವೇ. ಹಾಗೆಂದು ಜಿಬ್ರಯೇಲ್ ಕೂಡಾ ಆಗಲೇ ಕೇಳಿದ್ದಾನೆ ಎನ್ನುವಮಾತು ಕೂಡಾ ವಾಸ್ತವವೇ. ಒಬ್ಬನೇ ಎನ್ನುವ ಮಾತು ವಾಸ್ತವವಾದರೆ ಸೂರ್ಯನು, ಜಿಬ್ರಯೇಲ್ ಎನ್ನುವವರು ಇಬ್ಬರು ಅಲ್ಲ ಒಬ್ಬರೇಯೆಂದು ಸುಲಭವಾಗಿ ತಿಳಿಯಬಹುದು. ಭಾರತದೇಶದಲ್ಲಿ ಯಾರನ್ನಾದರೆ **ದೇವರು** ಎಂದು ಕರೆಯುತ್ತಿದ್ದೇವೊ ಆತನನ್ನೇ ಅರಬ್ ದೇಶದಲ್ಲಿ **ಅಲ್ಲಾಹ್** ಎಂದು ಕರೆಯುತ್ತಿದ್ದಾರೆ. ಅಷ್ಟುಮಾತ್ರಕ್ಕೆ ಅಲ್ಲಾಹ್, ದೇವರು ಇಬ್ಬರು ಬೇರೆಬೇರೆಯೆಂದು ಹೇಳಲಾರೆವು. ದೇವರು ಎಂದರೂ, ಅಲ್ಲಾಹ್ ಎಂದರೂ ಇಬ್ಬರೂ ಒಬ್ಬರೇಯೆಂದು ಹೇಳಿದಂತೆ, ಭಾರತ ದೇಶದಲ್ಲಿ ಸೂರ್ಯನೆಂದು ಯಾರನ್ನು ಕರೆಯುತ್ತಿದ್ದೇವೊ ಆತನನ್ನೇ ಅರಬ್ ದೇಶದಲ್ಲಿ ಜಿಬ್ರಯೇಲ್ ಎಂದು ಕರೆಯುತ್ತಿದ್ದೇವೆ. ಆದ್ದರಿಂದ ಇಬ್ಬರೂ ಒಬ್ಬರೇಯೆಂದು ಹೇಳ ಬಹುದು. ನಾವು ಮೊದಲಿನಿಂದ ಜಿಬ್ರಯೇಲ್ ಖಗೋಳದಲ್ಲಿನ ಒಂದು ಗ್ರಹವೆಂದು ಹೇಳುತ್ತಾ ಬರುತ್ತಿದ್ದೇವೆ. ಸೂರ್ಯನು ಗ್ರಹವೇ, ಜಿಬ್ರಯೇಲ್ ಗ್ರಹವೇ. ಆಕಾಶವಾಣಿ ಬೋಧನೆಯನ್ನು ಒಬ್ಬರೇ ಕೇಳಿದ್ದಾರೆ ಆ ಒಬ್ಬರನ್ನೇ ಸೂರ್ಯನೆಂದು ಒಂದುಸಲ ಹೇಳಿದಾಗ, ಮತ್ತೊಂದುಸಲ ಜಿಬ್ರಯೇಲ್ ಎಂದು ಹೇಳಿದ್ದೇವೆ. ಸೂರ್ಯನು ಎನ್ನುವ ಹೆಸರು ಜಿಬ್ರಯೇಲ್ ಎನ್ನುವ ಹೆಸರು ಎರಡು ಒಂದೇಯೆಂದು ತಿಳಿದಾಗ ಎಲ್ಲಾ ಪ್ರಶ್ನೆಗಳಿಗು ಉತ್ತರ ದೊರೆಯುತ್ತದೆ. ಜಿಬ್ರಯೇಲ್ ಹೆಸರಿನಿಂದ ಮುಹಮ್ಮದ್ ಪ್ರವಕ್ತರಿಗೆ ಜ್ಞಾನವನ್ನು ಹೇಳಿದವನೇ ಸೂರ್ಯನೆನ್ನುವ ಹೆಸರಿನಿಂದ ಮನುವಿಗೆ ಜ್ಞಾನವನ್ನು ಹೇಳಿದ್ದಾನೆ. ದ್ವಾಪರಯುಗದಲ್ಲಿ ಮನುವಿಗೆ ಸೂರ್ಯನೆನ್ನುವ ಹೆಸರಿನಿಂದ ಹೇಳಿದ ಗ್ರಹವೇ ಕಲಿಯುಗದಲ್ಲಿ ಜಿಬ್ರಯೇಲ್ ಎನ್ನುವ ಹೆಸರುಹೊಂದಿ ಮುಹಮ್ಮದ್ ಪ್ರವಕ್ತರವರಿಗೆ ಜ್ಞಾನವನ್ನು ಹೇಳುವುದಾಗಿದೆ.

ಸೃಷ್ಟಿ ಆದಿಯಲ್ಲಿನ ಜ್ಞಾನವನ್ನೇ ಸೂರ್ಯನು ಹೇಳುವುದರಿಂದ, ಅದೇ ಜ್ಞಾನವನ್ನೇ ಕೃಷ್ಣನು ವ್ಯಾಸನ ಮುಖಾಂತರ **ಪ್ರಥಮ ದೈವಗ್ರಂಥ ಭಗವದ್ಗೀತೆಯಾಗಿ** ಬರೆಸಿದ್ದಾನೆ. ಸೃಷ್ಟಿ ಆದಿಯಲ್ಲಿ ಜ್ಞಾನವನ್ನೇ ಜಿಬ್ರಯೇಲ್

ಮುಹಮ್ಮದ್ ಪ್ರವಕ್ತರಿಗೆ ಹೇಳುವುದರಿಂದ, ಪ್ರವಕ್ತ ಮುಖಾಂತರ **ಅಂತಿಮ ದೈವಗ್ರಂಥ ಖುರ್‌ಆನ್** ಹೊರಗೆ ಬಂದಿದೆ. ಇದನ್ನನುಸರಿಸಿ ಪ್ರಥಮ ದೈವ ಗ್ರಂಥದಲ್ಲಿರುವ ಜ್ಞಾನವೇ ಅಂತಿಮ ದೈವಗ್ರಂಥದಲ್ಲಿ ಇದೆ. ಭಾರತ ದೇಶದಲ್ಲಿ ಸೂರ್ಯನೆಂದು ಹೆಸರಿಟ್ಟು ಕರೆದವನನ್ನು ಅರಬ್ ದೇಶದಲ್ಲಿ ಜಿಬ್ರಯೇಲ್ ಎಂದು ಹೇಗೆ ಕರೆದಿದ್ದೀರೊ, ಹಾಗೆಯೇ ಭಾರತದೇಶದಲ್ಲಿ ಹೇಳಲಾದ ಜ್ಞಾನವನ್ನು **ಭಗವದ್ಗೀತೆ** ಎನ್ನುವ ಹೆಸರಿನಿಂದ ಕರೆದ ಗ್ರಂಥವನ್ನು ಅರಬ್ ದೇಶದಲ್ಲಿ **ತೌರಾತ್** ಗ್ರಂಥವೆಂದು ಹೆಸರಿಟ್ಟು ಕರೆಯುತ್ತಿದ್ದಾರೆ. ಈ ವಿಷಯ ಪ್ರವಕ್ತರಿಗೆ ಮೊದಲೇ ತಿಳಿದಿದೆ, ಆದ್ದರಿಂದ ಆತನು ಹೇಳಿದ ಆಯತ್‌ಗಳಲ್ಲಿ ತೌರಾತ್‌ನಲ್ಲಿರುವ ಜ್ಞಾನವೇ ಖುರಾನ್ ಗ್ರಂಥದಲ್ಲಿ ಇದೆಯೆಂದು ಹೇಳಿದ್ದಾನೆ. ಅದೇ ವಿಷಯವನ್ನು ಹೇಳುತ್ತಾ ಸೂರಾ 5, ಆಯತ್ 48ರಲ್ಲಿ ಹೀಗೆ ಹೇಳಲಾಗಿದೆಯೆಂದು ಜ್ಞಾಪಕ ಮಾಡುತ್ತಿದ್ದೇವೆ. (5-48) **"ನಾವು ನಿನ್ನ ಕಡೆಗೆ ಕಳಿಸಿದ ಈ ಗ್ರಂಥವನ್ನು ಖುರಾನ್‌ನನ್ನು ಸತ್ಯಸಮೇತವಾಗಿ ರೂಪೊಂದಿಸಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು (ತೌರಾತ್‌ನ್ನು) ಸತ್ಯವೆಂದು ಧೃಢೀಕರಿಸುತ್ತಿದೆ."** (5-44) **"ನಾವು ತೌರಾತ್ ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶನ, ಜ್ಯೋತಿ ಇವೆ. ಈ ತೌರಾತ್ ಗ್ರಂಥ ಆಧಾರವಾಗಿಯೇ ಮುಸ್ಲಿಮ್‌ರಾದ ಪ್ರವಕ್ತರು, ರಬ್ಬಾನಿಗಳು, ಧರ್ಮವೇತ್ತರು ಯೂದರ ಸಮಸ್ಯೆಗಳನ್ನು ಪರಿಷ್ಕಸುತ್ತಿದ್ದರು."**

**ಪ್ರಶ್ನೆ :– ಮೂರನೆ ದೈವಗ್ರಂಥವೇ ಅಂತಿಮ ದೈವಗ್ರಂಥವಾಗಿ ಕರೆಯುವುದರಿಂದ ಆ ಹೆಸರು ಏಕೆ ಬಂದಿದೆಯೆಂದು ತಿಳಿಯದ ಮುಸ್ಲಿಮ್‌ರು "ಜ್ಞಾನದಲ್ಲಿ ಕೊನೆಯ ಗ್ರಂಥ ಇದೇ ಇದರ ನಂತರ ಜ್ಞಾನ ಗ್ರಂಥವೇ ಬರುವುದಿಲ್ಲ" ಎನ್ನುತ್ತಿದ್ದಾರೆ. ಆದರೇ ಅಂತಿಮ ದೈವಗ್ರಂಥ ನಂತರ ಕೊನೆಯದಾಗಿ ಅಂದರೆ ದೇವರ ಅಂತಿಮ ಅವತಾರವಾಗಿ ಮೂರನೆ ಭಗವಂತನು ಬರಬೇಕಾಗಿದೆ. ಮೂರನೆಸಲ ಭಗವಂತನು ಬಂದರೆ ಮೊದಲಿಗಿಂತ ಹೆಚ್ಚಾಗಿ ಜ್ಞಾನವನ್ನು ಬೋಧಿಸುತ್ತಾನೆ ಎಂದು ಹೇಳಿದ್ದಾರೆ. ಹಾಗೆ ಹೇಳಿದರೆ ಇಲ್ಲಿ ಮುಸ್ಲಿಮ್‌ರು ಹೇಳಿದ ಮಾತಿಗೆ ವಿರುದ್ಧವಾಗಿ ಹೇಳಿದಂತಾಗುತ್ತದೆ ಅಲ್ಲವೆ!**

**ಉತ್ತರ :–** ದೇವರು ಸಂಪೂರ್ಣ ಜ್ಞಾನವನ್ನು ತನ್ನ ಮೂರನೆ ಅವತಾರದಲ್ಲಿ ಹೇಳುವುದು ಸತ್ಯವೇ. ಏಕೆಂದರೆ! ತನ್ನ ಕೊನೆಯ ಅವತಾರ ಕೊನೆಯ ಬೋಧನೆಯಿಂದಲೇ ಭೂಮಿಯಲ್ಲಿರುವ ಅಜ್ಞಾನವೆಲ್ಲವೂ ಅಂತ್ಯವಾಗಿಹೋಗಬೇಕಾಗಿದೆ. ಮುಸ್ಲಿಮ್‌ರು ಸಾಧಾರಣ ಮನುಷ್ಯರು ಮಾತ್ರವೇ ಅವರಿಗೆ ತಮ್ಮ ಗ್ರಂಥವಾಗಿ ಹೇಳಿಕೊಳ್ಳುವ ಖುರ್‌ಆನ್‌ನಲ್ಲಿನ ವಿಷಯಗಳೇ ಸರಿಯಾಗಿ ತಿಳಿದಿಲ್ಲ. 'ಖುರಾನ್ ಗ್ರಂಥ ನಮ್ಮದು' ಎಂದು ಹೇಳುವುದರಲ್ಲಿಯೇ ಅವರಿಗೆ ಆ ಗ್ರಂಥವನ್ನು ಕುರಿತು ಸರಿಯಾಗಿ ತಿಳಿದಿಲ್ಲವೆಂದು ಹೇಳಬಹುದು. ಖುರ್‌ಆನ್ ಗ್ರಂಥ ಸರ್ವಮಾನವರಿಗೂ' ಸಂಬಂಧಿಸಿದ ಗ್ರಂಥವಾಗಿ ಇರುವಾಗ 'ಅದು ನಮ್ಮ ಗ್ರಂಥ' ಎನ್ನುವುದರಲ್ಲಿ ಅರ್ಥವೇ ಇಲ್ಲ. **ಭಗವದ್ಗೀತೆ ಹಿಂದೂಗಳ ಗ್ರಂಥ ಅಲ್ಲ. ಬೈಬಲ್ ಕ್ರೈಸ್ತರ ಗ್ರಂಥ ಅಲ್ಲ. ಖುರ್‌ಆನ್ ಮುಸ್ಲಿಮ್‌ರ ಗ್ರಂಥವಲ್ಲ.** ಮೂರು ಗ್ರಂಥಗಳ ಹೆಸರುಗಳು ಬೇರೆಯಾದರೂ ಆ ಮೂರು ಗ್ರಂಥಗಳು ಒಂದೇ ದೇವರ ಜ್ಞಾನಕ್ಕೆ ಸಂಬಂಧಿಸಿರುವವು. ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಆ ಮೂರು ಗ್ರಂಥಗಳಲ್ಲಿ ಇದೆ. ಪ್ರಥಮ ಗ್ರಂಥವಾಗಿ ಹೇಳಲ್ಪಟ್ಟ ಭಗವದ್ಗೀತೆಗೆ ಸಂಬಂಧಿಸಿದ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆ. ಮೂರು ಗ್ರಂಥಗಳು ಒಂದರೊಂದಿಗೆ ಮತ್ತೊಂದು ಅವಿನಾಭಾವ ಸಂಬಂಧ ಹೊಂದಿವೆ. ಹಾಗಿರುವಾಗ ಖುರ್‌ಆನ್ ಗ್ರಂಥವೇ ಎಲ್ಲರಿಗೂ ಅಗತ್ಯವೆಂದು ಹೇಳುವುದು ತಪ್ಪಾಗುತ್ತದೆ. ಖುರಾನ್ ಗ್ರಂಥದಲ್ಲಿ 62 ನೇ ಸೂರಾ, 5ನೇ ಆಯತ್‌ನಲ್ಲಿ (62-5) **"ತೌರಾತ್ ಗ್ರಂಥದ ಪ್ರಕಾರ ಆಚರಿಸಬೇಕೆಂದು ಆದೇಶಿಸಿದರೂ, ಅದಕ್ಕೆ ಅನುಗುಣವಾಗಿ ಆಚರಿಸಿದವರು ಎಷ್ಟು ಗ್ರಂಥಗಳನ್ನು ಅನುಸರಿಸಿದರೂ ಅಂತಹವರನ್ನು ಎಷ್ಟೋ ಗ್ರಂಥಗಳನ್ನು ಬೆನ್ನಿನ ಮೇಲೆ ಹೊರುವ ಕತ್ತೆಯಂಥವರೆಂದು ಉದಾಹರಣೆಯಾಗಿ ಹೇಳಬಹುದು,"** ಎಂದು ಹೇಳಿದ ಪ್ರವಕ್ತ ಮಾತನ್ನು ಮರೆತುಹೋಗಬಾರದು. ಹೀಗೆ ಜಿಬ್ರಯೇಲ್ ಹೇಳಿದ ಮಾತನ್ನು ಪ್ರವಕ್ತರು ಹೇಳಿರುವಾಗ ಈ ಮಾತನ್ನು ಅತಿಕ್ರಮಿಸಿ ಕೊನೆಯದಾಗಿ ಬಂದಿರುವ ಖುರ್‌ಆನ್ ಗ್ರಂಥವೇ ಶ್ರೇಷ್ಠವೆನ್ನುವುದು ಅಜ್ಞಾನವಾಗುತ್ತದೆಂದು ಹೇಳಬಹುದು. ಹೀಗೆ ಮುಸ್ಲಿಮ್‌ರು ಹೇಳುತ್ತಿದ್ದಾರೆಂದರೂ, ಕ್ರೈಸ್ತರು ತಮ್ಮ ಬೈಬಲ್ ಜ್ಞಾನವೇ ಶ್ರೇಷ್ಠವಾದುದೆಂದು ಹೇಳಿದರೂ,

ಭಗವದ್ಗೀತೆ ಉಳಿದ ಎರಡು ಗ್ರಂಥಗಳೊಂದಿಗೆ ಸಂಬಂಧ ಹೊಂದಿದೆಯೆಂದು ಹಿಂದೂಗಳು ತಿಳಿಯದಿದ್ದರೂ ಅವರಿಗೆ ದೇವರು ಹೇಳಿದ ಜ್ಞಾನ ಅರ್ಥ ವಾಗಲಿಲ್ಲವೆಂದೇ ಹೇಳಬಹುದು.

ಮೂರು ದೈವಗ್ರಂಥಗಳನ್ನು ಬೇರೆಬೇರೆಯಾಗಿ ಭಾವಿಸಿ, ಒಂದು ಗ್ರಂಥವನ್ನು ಮಾತ್ರ ಹೊಗಳುತ್ತಾ ಉಳಿದ ಎರಡು ಗ್ರಂಥಗಳನ್ನು ನೋಡದವನು, ಓದದವನು ಪೂರ್ತಿ ಅಜ್ಞಾನದಲ್ಲಿ ಇದ್ದಂತೆ ಲೆಕ್ಕಿಸಲ್ಪಡುತ್ತದೆ. ಭಗವದ್ಗೀತೆ, ಬೈಬಲ್, ಖುರ್‌ಆನ್ ಯಾರಾದರೆ ಅಸೂಯೆಯಿಂದ ನೋಡದಂತೆ ಗೌರವವಾಗಿ ನೋಡುತ್ತಾನೊ, ಯಾರಾದರೆ ಮೂರು ಗ್ರಂಥಗಳನ್ನು ಓದಿ ಮೂರು ಗ್ರಂಥಗಳಲ್ಲಿನ ವಿಷಯಗಳನ್ನು ಗ್ರಹಿಸುತ್ತಾನೊ ಅವನನ್ನು ಮೂರು ಗ್ರಂಥಗಳ ಜ್ಞಾನಿಯೆಂದು ಹೇಳಬಹುದು. ಹಾಗೆ ಮೂರು ಮತಗಳಲ್ಲಿಯೂ ಜ್ಞಾನಿಯಾದವನೆಂದು ಹೇಳಬಹುದು. ಹಾಗಲ್ಲದೆ ಯಾರಾದರೆ ತನ್ನದು ಒಂದು ಗ್ರಂಥವೇಯೆಂದು, ಉಳಿದ ಎರಡು ಗ್ರಂಥಗಳು ಅನ್ಯಮತದವರೆಂದು ಅಸೂಯೆಯಿಂದ ನೋಡುತ್ತಾನೊ ಅವನನ್ನು ಅಜ್ಞಾನಿ ಎನ್ನುವುದೇ ಅಲ್ಲದೆ ಖುರಾನ್ ಗ್ರಂಥದಲ್ಲಿ 5ನೇ ಸೂರಾ, 68ನೇ ಆಯತ್‌ನಲ್ಲಿ ಅಂಥವರನ್ನು ಕುರಿತು ಏನು ಬರೆದಿದ್ದಾರೊ ನೋಡಿರಿ. **(5–68) "ತೌರಾತ್‌ನ್ನು (ಭಗವದ್ಗೀತೆಯನ್ನು) ಇಂಜೀಲ್ (ಬೈಬಲ್)ನ್ನು ನಿಮ್ಮ ಪ್ರಭುವಿನ ಕಡೆಯಿಂದ ನಿಮ್ಮ ಹತ್ತಿರಕ್ಕೆ ಕಳಿಸಿದ ಖುರ್‌ಆನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೂ ಇಲ್ಲದಂತೆಯೇ"** ಎಂದು ಹೇಳಲ್ಪಟ್ಟಿದೆ. ದೇವರು (ಅಲ್ಲಾಹ್) ಹೀಗೆ ಹೇಳಿದ್ದಾನೆಂದು ತಿಳಿದ ಯಾರೂ ಇತರ ದೈವಗ್ರಂಥಗಳನ್ನು ಕುರಿತು ಅಸೂಯೆಯಿಂದ ಮಾತನಾಡುವು ದಿಲ್ಲ.

**ಪ್ರಶ್ನೆ :– ಇಂದಿನ ಕಾಲದಲ್ಲಿ ದೇವರ ಬಗ್ಗೆ ಉಳಿದ ಎಲ್ಲರಿಗಿಂತ ಮುಸ್ಲಿಮ್‌ರೇ ಹೆಚ್ಚಾಗಿ ಭಕ್ತಿಹೊಂದಿದ್ದಾರೆಂದು, ಹೆಚ್ಚಾಗಿ ಅಲ್ಲಾಹ್ ಬಗ್ಗೆ ಪ್ರಾರ್ಥನೆ (ನಮಾಜ್) ಮಾಡುತ್ತಿದ್ದಾರೆಂದು ಕೇಳಿದ್ದೇವೆ. ಆದರೆ ಅವರೇ ಹೆಚ್ಚಾಗಿ ತಮ್ಮ ಗ್ರಂಥ**

**ಶ್ರೇಷ್ಠವಾದುದೆಂದು, ತಮ್ಮ ಗ್ರಂಥದೊಂದಿಗೆ ಸಮಾನವಾದುದು ಇಲ್ಲವೆಂದು ಹೇಳುತ್ತಿದ್ದಾರೆ. ಅವರು ಖುರ್‌ಆನ್ ಗ್ರಂಥವನ್ನು ಓದಿ ಆ ಮಾತನ್ನು ಹೇಳುತ್ತಿದ್ದೀರಾ? ಓದದೇ ತಿಳಿಯದೆ ಆ ಮಾತನ್ನು ಹೇಳಿದ್ದೀರಾ?**

**ಉತ್ತರ :–** ಮಸ್ಲಿಮ್‌ರಲ್ಲಿ ಕೆಲವರು ಮಾತ್ರ ಖುರ್‌ಆನ್‌ನನ್ನು ಓದಿದವರು ಇದ್ದಾರೆ. ಉಳಿದವರು ಓದಿಲ್ಲವೆಂದೇ ಹೇಳಬಹುದು. ಖುರಾನ್ ಅರಬ್ಬಿ ಭಾಷೆಯಲ್ಲಿ ಇರುವುದರಿಂದ ಓದಿದವರಲ್ಲಿ ಕೂಡಾ ಅರಬ್ಬಿ ಭಾಷೆ ಬಂದವರಿಗೇ ಅದು ಅರ್ಥವಾಗಿದೆಯೆಂದು ಹೇಳಬಹುದು. ಅರಬ್ಬಿ ಭಾಷೆ ಬರದವರು ಓದಿದರೂ ಅದು ಅರ್ಥ ಆಗುವುದಿಲ್ಲ. ಮುಸ್ಲಿಮ್‌ರು ಕೆಲವರು ಮಾತ್ರವೇ ಓದಿದ್ದಾರೆ. ಓದಿದವರು ಬೋಧಕರಾಗಿ ತಯಾರಾಗಿ ಅವರು ಏನು ಹೇಳಿದರೆ ಉಳಿದ ಮುಸ್ಲಿಮರು ಅದೇ ಕೇಳುತ್ತಿದ್ದಾರೆ. ಅರಬ್ಬಿ ಭಾಷೆಯಲ್ಲಿ ಓದಿದವರು ನೂರಕ್ಕೆ ಇಬ್ಬರು ಅಥವಾ ಮೂವರಿದ್ದಾರೆಂದು ಹೇಳಬಹುದು ಒಂದುವೇಳೆ ಅವರು ಓದಿದರೂ ಓದಿರುವವೆಲ್ಲ ಅರ್ಥವಾಗಿವೆಯೆಂದು ನಂಬಿಕೆಯಿಲ್ಲ. ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳನ್ನು ಮೂರನ್ನು ಪರಿಶೀಲಿಸಿ ನೋಡಿದರೆ ಭಗವದ್ಗೀತೆಗಿಂತ, ಬೈಬಲ್‌ಗಿಂತ ಹೆಚ್ಚಾಗಿ ಸೂಕ್ಷ್ಮ ಭಾವನೆಯಿಂದ ಕೂಡಿಕೊಂಡ ವಾಕ್ಯಗಳು ಖುರಾನ್‌ನಲ್ಲಿ ಇವೆ. ಖುರಾನ್ ಗ್ರಂಥದಲ್ಲಿ ಕೂಡಾ ಮೂರನೆ ಸೂರಾ, ಏಳನೇ ಆಯತ್‌ನಲ್ಲಿ ಖುರಾನ್ ಗ್ರಂಥ ಸ್ಥೂಲ, ಸೂಕ್ಷ್ಮ ಭಾವನೆಗಳಿಂದ ಕೂಡಿಕೊಂಡಿದೆಯೆಂದು ಹೇಳುವುದಾಗಿದೆ. ಸ್ಥೂಲ ಅರ್ಥ ಕೊಡುವವುಗಳನ್ನು **"ಮುಹ್ಕಮಾತ್"** ವಾಕ್ಯಗಳೆಂದು, ಸೂಕ್ಷ್ಮ ಅರ್ಥದಿಂದ ಕೂಡಿಕೊಂಡವುಗಳನ್ನು **"ಮುತಷಾಬಿಹಾತ್"** ವಾಕ್ಯಗಳೆನ್ನುತ್ತಾರೆ. ಸ್ಥೂಲ ಅರ್ಥ ದಿಂದ ಕೂಡಿಕೊಂಡ ವಾಕ್ಯಗಳು ಖುರಾನ್ ಗ್ರಂಥಕ್ಕೆ ಮೂಲಗಳೆಂದು ಅದೇ ವಾಕ್ಯದಲ್ಲಿ ಹೇಳಿದ್ದಾರೆ. ಒಂದು ಮನೆಗೆ ಮೂಲವಿರುವಂತೆ ಖುರಾನ್ ಗ್ರಂಥಕ್ಕೆ ಮೂಲಾಧಾರವಾದ ವಾಕ್ಯಗಳಿವೆಯೆಂದು ಹೇಳುವುದಾಗಿದೆ. ಮನೆಗೆ ಮೂಲಾಧಾರ ವಾದವು ಬುನಾದಿಗಳು ಅಥವಾ ಗುಣಾದಿಗಳು ಎಂದು ಹೇಳುತ್ತಾರೆ. ಮನೆ ಭಾರವೆಲ್ಲವನ್ನು ಹೊರುವವುಗಳನ್ನು ಮನೆ ಬುನಾದಿಗಳು

ಅಥವಾ ಮೂಲಗಳು ಎಂದು ಕರೆಯುತ್ತಾರೆ. ಮನೆ ಬುನಾದಿಗಳು ಮನೆಯಲ್ಲಿ ಐದು ಭಾಗಗಳಾಗಿರುತ್ತವೆ. ಉಳಿದ ನಾಲ್ಕು ಭಾಗಗಳ ಮನೆ, ಒಂದು ಭಾಗ ಬುನಾದಿಗಳ ಮೇಲೆ ನಿರ್ಮಿಸಲ್ಪಟ್ಟಿರುತ್ತದೆ. ಹಾಗೆಯೇ ಖುರಾನ್ ಗ್ರಂಥದಲ್ಲಿ ಒಂದು ಭಾಗ ಗ್ರಂಥಮೂಲಗಳಾದ ವಾಕ್ಯಗಳಿರುವಾಗ, ನಾಲ್ಕು ಭಾಗಗಳು ಮೇಲೆಗೋಡೆ ಗಳಂತಹ ವಾಕ್ಯಗಳಿವೆ. ಇದರಿಂದ ಖುರಾನ್ ಗ್ರಂಥದಲ್ಲಿ ಒಂದು ಭಾಗ ಸ್ಥೂಲ ಅರ್ಥಕೊಡುವ ವಾಕ್ಯಗಳಿರುವಾಗ, ನಾಲ್ಕು ಭಾಗಗಳು ಸೂಕ್ಷ್ಮವಾದ ಅರ್ಥದಿಂದ ಕೂಡಿಕೊಂಡ ವಾಕ್ಯಗಳು ಇವೆಯೆಂದು ತಿಳಿಯುತ್ತಿದೆ. ಆದರೆ ಮುಸ್ಲಿಮರು ತಮ್ಮ ಗ್ರಂಥದಲ್ಲಿ ಸೂಕ್ಷ್ಮವಾದ ಅರ್ಥ ಇರುವವು ಇಲ್ಲವೆಂದು, ಕೆಲವರು ಅದೇ ಕೆಲಸವಾಗಿ ಸೂಕ್ಷ್ಮ ಅರ್ಥ ಹೇಳುತ್ತಿದ್ದಾರೆಂದು ಹೇಳಿದ್ದಾರೆ. ಹಾಗೆ ಸೂಕ್ಷ್ಮ ಅರ್ಥಗಳನ್ನು ಹೇಳಿ ಮುಸ್ಲಿಮರನ್ನು ತಪ್ಪುದಾರಿ ಹಿಡಿಸುತ್ತಿದ್ದಾರೆಂದು, ಅಂತಹವರ ಮಾತುಗಳು ಕೇಳಬಾರದೆಂದು ಹೇಳುತ್ತಿದ್ದಾರೆ. ಅಲ್ಲಾಹ್ ಒಂದುಕಡೆ ತನ್ನ ಆಯತ್‌ನಲ್ಲಿ ಗ್ರಂಥದಲ್ಲಿ ಸ್ಥೂಲ, ಸೂಕ್ಷ್ಮ ಎರಡು ವಿಧಗಳ ವಾಕ್ಯಗಳಿವೆಯೆಂದು ಹೇಳುತ್ತಿರುವಾಗ, ನಮ್ಮ ಗ್ರಂಥದಲ್ಲಿ ಸೂಕ್ಷ್ಮ ಅರ್ಥಗಳಿರುವ ವಾಕ್ಯಗಳೆ ಇಲ್ಲ ಎನ್ನುವಂತೆ ಮಾತನಾಡುತ್ತಿದ್ದಾರೆ. ಸೂರಾ 3, ಆಯತ್ 7ರಲ್ಲಿ ದೇವರು ಏನು ಹೇಳಿದ್ದಾನೊ, ಮನುಷ್ಯರು ಏನು ಬರೆದಿದ್ದಾರೊ ಒಂದುಸಲ ನೋಡಿರಿ. **(3–7) "ನಿನ್ನ ಮೇಲೆ ಈ ಗ್ರಂಥವನ್ನು ಅವತರಿಸಿದವನು ದೇವರೇ. ಇದರಲ್ಲಿ ಸ್ಪಷ್ಟವಾದ ಸ್ಥೂಲ ವಾಕ್ಯಗಳು (ಮುಹ್ಕಮಾತ್ ವಿಷಯಗಳು) ಇವೆ. ಅವು ಗ್ರಂಥಕ್ಕೆ ಮೂಲ. ಮತ್ತೆಕೆಲವು ಬಹುವಿಧ ಭಾವನೆಗಳಿಂದ ಕೂಡಿಕೊಂಡ ಸೂಕ್ಷ್ಮ ವಿಷಯಗಳು (ಮುತಷಾಬಿಹಾತ್ ವಿಷಯಗಳು) ಇವೆ. ಹೃದಯದಲ್ಲಿ ವಕ್ರತೆ ಇರುವವರು ಇದರಲ್ಲಿನ ಸೂಕ್ಷ್ಮ ವಚನಗಳ ಹಿಂದೆಬಿದ್ದು ಪ್ರಜೆಗಳನ್ನು ತಪ್ಪುದಾರಿ ಹಿಡಿಸುವುದಕ್ಕೆ ಪ್ರಯತ್ನಿಸುತ್ತಾರೆ. ತಮ್ಮ ಉದ್ದೇಶಗಳಿಗೆ ಸರಿಹೋಗುವಂತೆ ಅರ್ಥಗಳನ್ನು ಹೇಳುತ್ತಾರೆ. ನಿಜಕ್ಕೆ ಸೂಕ್ಷ್ಮವಚನಗಳ ವಾಸ್ತವ ಅರ್ಥ ಅಲ್ಲಾಹ್‌ಗೆ ಹೊರತು (ದೇವರಿಗೆ ಹೊರತು) ಮತ್ಯಾರಿಗೂ ತಿಳಿದಿಲ್ಲ. ಆದರೆ ಜ್ಞಾನದಲ್ಲಿ ಪರಿಪಕ್ವತೆ ಹೊಂದಿದವರು ನಾವು ಇವುಗಳನ್ನು ನಂಬುತ್ತಿದ್ದೇವೆಂದು, ಇವೆಲ್ಲವೂ ದೇವರ ಹತ್ತಿರದಿಂದ ಬಂದಿರುವ ವಾಕ್ಯಗಳೇ ಎನ್ನುತ್ತಾರೆ. ಬುದ್ಧಿ ಶ್ರದ್ಧೆ ಇರುವವರು**

**ಮಾತ್ರವೇ. ದೇವರ ಜ್ಞಾನವನ್ನು ಗ್ರಹಿಸುತ್ತಾರೆ"** ಎಂದು ಬರೆಯುವುದರಿಂದ ಮುಸ್ಲಿಮ್‌ರು ಖುರಾನ್ ಗ್ರಂಥದಲ್ಲಿನ ಎಲ್ಲಾ ವಾಕ್ಯಗಳಿಗು ಸ್ಥೂಲವಾಗಿಯೇ ಅರ್ಥವನ್ನು ಹೇಳುತ್ತಿದ್ದಾರೆ ಹೊರತು ಸೂಕ್ಷ್ಮವಾಗಿ ಒಂದು ಆಯತ್‌ಗು ಕೂಡಾ ಅರ್ಥ ಹೇಳಿಕೊಳ್ಳುತ್ತಿಲ್ಲ. ಯಾರಾದರೂ ತಿಳಿದವರು ಹೇಳಿದರೂ ಅವರನ್ನು ವಕ್ರಬುದ್ಧಿ ಇರುವವರೆಂದು, ಅವರ ಹೃದಯಗಳಲ್ಲಿ ತಪ್ಪು ಭಾವನೆಗಳಿವೆಯೆಂದು ಹೇಳುತ್ತಿದ್ದಾರೆ.

ಖುರಾನ್ ಗ್ರಂಥದಲ್ಲಿನ ವಾಕ್ಯಗಳು ವೇಮನಯೋಗಿ ಪದ್ಯಗಳಂತೆ ಇರುತ್ತವೆ. ವೇಮನಯೋಗಿ ಪದ್ಯಕ್ಕೆ ಸ್ಥೂಲವಾಗಿಯಾದರೂ ವಿವರವನ್ನು ಹೇಳಬಹುದು ಅಥವಾ ಸೂಕ್ಷ್ಮವಾಗಿಯಾದರೂ ಉತ್ತರ ಹೇಳಬಹುದು. ಇಲ್ಲಿ ದ್ವಂದ್ವ ಅರ್ಥಗಳು ಇರುವ ವೇಮನ ಪದ್ಯವನ್ನು ನೋಡೋಣ.

**ನಾಯಿಯನ್ನು ತಿಂದವನು ಗುರುಲಿಂಗ ಜಂಗಮ**
**ಹಂದಿಯನ್ನು ತಿಂದವನು ಪರಮ ಯೋಗಿ**
**ಆನೆಯನ್ನು ತಿಂದವನು ಎಷ್ಟು ಸುಜ್ಞಾನಿಯೊ**
**ವಿಶ್ವದಾಭಿರಾಮ ಕೇಳಯ್ಯಾ ವೇಮಾ.**

ವೇಮನಯೋಗಿ ಪದ್ಯಗಳಿರುವ **"ನಿಗೂಢ ತತ್ತ್ವಾರ್ಥ ಬೋಧಿನಿ"** ಎನ್ನುವ ನಮ್ಮ ರಚನೆಯಲ್ಲಿನ ಗ್ರಂಥಕ್ಕೆ ನಾವು ವಿವರವನ್ನು ಬರೆದಿದ್ದೇವೆ. ಈ ಪದ್ಯ ಮೇಲಕ್ಕೆ ನೋಡುವುದಕ್ಕೆ ಸೂಕ್ಷ್ಮವಾದ ಅರ್ಥದಿಂದ ಕೂಡಿಕೊಂಡಂತೆ ಕಾಣಿಸುವುದಿಲ್ಲ. ಇದರಲ್ಲಿ ಸೂಕ್ಷ್ಮ ಭಾವನೆಗಳಿರುವಂತೆ ಕಾಣಿಸುವುದಿಲ್ಲ. ನಾಯಿ, ಹಂದಿ, ಆನೆಯನ್ನು ತಿಂದವರು ಕ್ರಮವಾಗಿ ಗುರುವು, ಯೋಗಿ, ಜ್ಞಾನಿ ಎಂದು ಹೇಳಲ್ಪಟ್ಟಿದೆ. ಆದರೆ ಅವುಗಳನ್ನು ತಿನ್ನುವವರು ಭೂಮಿಮೇಲೆ ಇರುವವರು ಗುರುವಾಗಿ, ಯೋಗಿಯಾಗಿ, ಜ್ಞಾನಿಯಾಗಿ ಇಲ್ಲ. ನೀಚವಾದ ಸ್ವಭಾವಗಳಿಂದ ತುಂಬಿಕೊಂಡಿದ್ದಾರೆ. ಹಾಗಿರುವಾಗ ಸ್ಥೂಲವಾದ ಭಾವನೆಗಳಲ್ಲಿ ಸತ್ಯ ಇಲ್ಲವೆಂದು ನಿರ್ಣಯವಾಗುತ್ತಿದೆ. ಆಗ ಸೂಕ್ಷ್ಮ ಭಾವನೆ ಸರಿಹೋಗುತ್ತದೇನೋ ಎಂದು

ನೋಡಬೇಕಾಗಿ ಬರುತ್ತದೆ. ಈ ಪದ್ಯಕ್ಕೆ ನಾವು ಬರೆದ ಸೂಕ್ಷ್ಮ ವಿವರವನ್ನು ಕೆಳಗೆ ನೋಡಿರಿ.

**ಭಾವಾರ್ಥ:–** ನಮ್ಮ ಶರೀರದಲ್ಲಿ ಮನಸ್ಸು ನಾಯಿಯಂತೆ ಅತಿ ಚಂಚಲವಾದುದು. ಒಂದುಕ್ಷಣ ಕೂಡಾ ಸ್ಥಿರವಾಗಿ ಇರದೆ ನಾಯಿ ಮನೆಮನೆ ತಿರುಗುವಂತೆ ಮನಸ್ಸು ಕೂಡಾ ವಿಷಯಗಳ ಮೇಲಕ್ಕೆ ಚಲಿಸುತ್ತಿರುತ್ತದೆ. ನಾಯಿಯಂತೆ ಚಂಚಲವಾದ ಮನಸ್ಸನ್ನು ಯಾರು ಜಯಿಸುತ್ತಾರೊ ಅವನು ನಿಜವಾಗಲು ಗುರುವಿಗೆ ಸಮಾನವೇ. ಗುರುವು ಮನಸ್ಸನ್ನು ಜಯಿಸಿದ್ದಾನೆನ್ನುವ ವಿಷಯವನ್ನು **ನಾಯಿಯನ್ನು ತಿಂದವನು ಗುರುಲಿಂಗನೆಂದು** ಮೇಲಿನ ಪದ್ಯದಲ್ಲಿ ಹೇಳಿದ್ದಾರೆ.

ಮನಸ್ಸು ಚಂಚಲವಾದುದೇ ಅಲ್ಲದೆ ಪರಮ ನೀಚವಾದ ವಿಷಯಗಳ ಮೇಲೆ ಕೂಡಾ ಹೋಗುತ್ತಿರುತ್ತದೆ ಆದ್ದರಿಂದ ಇದನ್ನು ಹಂದಿಗೆ ಸಮಾನವಾಗಿ ಹೋಲಿಸಿ ಅದನ್ನು ಜಯಿಸಿದವನು ಪರಮಯೋಗಿ ಎಂದು ತಿಳಿಸುತ್ತ **ಹಂದಿಯನ್ನು ತಿಂದವನು ಪರಮಯೋಗಿ** ಎಂದು ನಿರ್ಣಯಿಸಿದ್ದಾರೆ.

ಮನಸ್ಸು ಚಂಚಲವಾದುದು, ನೀಚವಾದುದೇ ಅಲ್ಲದೆ ದೃಢವಾದುದು, ಬಲವಾದುದಾಗಿ ಕೂಡಾ ಇದೆ. ಅದನ್ನು ಜಯಿಸಬೇಕೆಂದು ಪ್ರಯತ್ನ ಮಾಡಿದವರಿಗೆ ಸುಲಭವಾಗಿ ವಶವಾಗುವುದಿಲ್ಲ. ಎಷ್ಟು ಬಲವಾಗಿ ಮನಸ್ಸನ್ನು ನಿಲ್ಲಿಸಬೇಕೆಂದು ಪ್ರಯತ್ನ ಮಾಡಿದರೂ ಅದು ಬಲವಾದುದು ಆದ್ದರಿಂದ ಹೋಗುತ್ತಲೇ ಇರುತ್ತದೆ. ಪ್ರಯತ್ನವೆನ್ನುವ ಹಗ್ಗಗಳಿಗೆ ನಿಲ್ಲಲಾರದೆ ಕೆಲಸಗಳನ್ನು ಸುಲಭವಾಗಿ ಎಳೆದುಕೊಂಡು ಹೋಗುವ ಮನಸ್ಸು ಬಲವಾದುದಾಗಿ ವರ್ಣಿಸುತ್ತಾ ಅದನ್ನು ಆನೆಯಾಗಿ ಹೋಲಿಸಿ ಹೇಳಿದ್ದಾರೆ. ಅಂತಹ ಬಲವಾದ ಮನಸ್ಸನ್ನು ಜಯಿಸಿದವನು ಸುಜ್ಞಾನಿ ಎಂದು ಹೇಳುತ್ತಾ **ಆನೆಯನ್ನು ತಿಂದವನು ಎಷ್ಟು ಸುಜ್ಞಾನಿಯೋ** ಎಂದು ಹೇಳಿದ್ದಾರೆ.

ಮನಸ್ಸು ಚಂಚಲವಾದುದು ಆದ್ದರಿಂದ ನಾಯಿಯಾಗಿಯು, ನೀಚವಾದುದು ಆದ್ದರಿಂದ ಹಂದಿಯಾಗಿಯು, ಬಲವಾದುದು ಆದ್ದರಿಂದ

ಆನೆಯಾಗಿ ವರ್ಣಿಸಿ ಇದನ್ನು ಜಯಿಸುವುದನ್ನು ತಿಂದು ಇಲ್ಲದೇ ಮಾಡುವುದೆಂದು ವಿವರಿಸಿ ಹೇಳಿದ್ದಾರೆ.

ಸೂಕ್ಷ್ಮವಾದ ಭಾವನೆ ಪ್ರಕಾರ ಸರಿಯಾದ ಸಮಾಧಾನ ದೊರೆತಿದೆ. ಹಾಗೆ ಸೂಕ್ಷ್ಮವಾದ ಅರ್ಥವನ್ನು ಇಲ್ಲಿ ಹೇಳಿಕೊಳ್ಳದೆ ಹೋದರೆ ಪದ್ಯವನ್ನು ಬರೆದ ವೇಮನ ಕೂಡಾ ಬಾಧೆಪಡುತ್ತಾನೇನೊ! ಸ್ಥೂಲವಾಗಿ ಅರ್ಥ ಹೇಳಿದರೆ ಅದು ಸತ್ಯದೂರವಾಗಿದೆ. ಸೂಕ್ಷ್ಮವಾದ ಅರ್ಥವನ್ನು ಹೇಳಿದಾಗ ಸತ್ಯವಾಗಿ ಕಾಣಿಸುತ್ತಿದೆ. ಖುರಾನ್‌ನಲ್ಲಿ ದೇವರ ವಾಕ್ಯಗಳಿಗು ಕೂಡಾ ಸ್ಥೂಲವಾಗಿ ಹೇಳಿದರೆ ಸ್ವಲ್ಪವೂ ಸರಿಹೋಗುವುದಿಲ್ಲ, ಸತ್ಯವಾಗಿರುವುದಿಲ್ಲ. ಸತ್ಯವನ್ನು ತಿಳಿಯಬೇಕೆಂದರೆ ಕೆಲವು ವಾಕ್ಯಗಳಿಗೆ ಸೂಕ್ಷ್ಮವಾಗಿಯೇ ಅರ್ಥ ಹೇಳಬೇಕಾಗಿರುತ್ತದೆ. "ಸೂಕ್ಷ್ಮವಾದ ಅರ್ಥ ದೇವರಿಗೇ ತಿಳಿದಿದೆ' ಎನ್ನುವ ಮಾತನ್ನು ಅಡ್ಡ ಇಟ್ಟುಕೊಂಡು ವಾಕ್ಯವನ್ನು ಸೂಕ್ಷ್ಮವಾಗಿ ನೋಡದಂತೆ, ಸ್ಥೂಲವಾಗಿ ಹೇಳಿಕೊಳ್ಳುವುದಕ್ಕೆ ಅಭ್ಯಾಸವಾಗಿದ್ದಾರೆ. ಅವರಿಗೆ ನಾವು ಹೇಳುವುದು ಏನೆಂದರೆ! ಪ್ರತಿ ಮನುಷ್ಯನಲ್ಲಿಯು ಸತ್ಯವನ್ನು ಹೇಳಿಸುವವನು, ಅಸತ್ಯವನ್ನು ಹೇಳಿಸುವವನು ದೇವರೇ. **ದೇವರ ಮೇಲೆ ವಿಶ್ವಾಸವಿದ್ದು ನನ್ನನ್ನು ನಡೆಸುವವನು, ನನ್ನನ್ನು ಮಾತನಾಡುವಂತೆ ಮಾಡುವವನು ದೇವರೇ' ಎನ್ನುವ ಭಾವ ಇರುವವನಿಂದ ಸತ್ಯವಾದ ಸೂಕ್ಷ್ಮ ಅರ್ಥಗಳನ್ನೇ ಹೇಳಿಸುತ್ತಾನೆ.**

ಉದಾಹರಣೆಗೆ ಖುರ್‌ಆನ್ ಗ್ರಂಥದಲ್ಲಿ 29ನೇ ಸೂರಾ, 44ನೇ ಆಯತ್‌ನ್ನು ತೆಗೆದುಕೊಂಡು ನೋಡೋಣ. **(29-44) "ಅಲ್ಲಾಹ್ ಆಕಾಶಗಳನ್ನು, ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ. ಆಕಾಶಗಳನ್ನು, ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ತಿಳಿದರೆ ಇದರಲ್ಲಿಯೇ ದೊಡ್ಡ ನಿದರ್ಶನ ದೊರೆಯುತ್ತದೆ"** ಎಂದು ಇದೆ. ಇಲ್ಲಿ 'ಭೂಮಿಯನ್ನು ಆಕಾಶವನ್ನು' ಎಂದು ಹೇಳಿದ್ದರೆ ಮೇಲಕ್ಕೆ ಕಾಣಿಸುವ ಆಕಾಶ ಭೂಮಿಯನ್ನು ಸೃಷ್ಟಿಸಿದ್ದಾನೆಂದು, ಸುಲಭವಾಗಿ ಹೇಳಬಹುದು. ಆದರೆ ಹಾಗಲ್ಲದೆ **'ಆಕಾಶಗಳನ್ನು'** ಎಂದು ಬಹುವಚನದಲ್ಲಿ ಹೇಳಿರುವುದರಿಂದ ಮತ್ತು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು

ಹೇಳಿರುವುದರಿಂದ, ಇದು ಸ್ಥೂಲ ವಾಖ್ಯ ಅಲ್ಲವೆಂದು ಸೂಕ್ಷ್ಮವಾಕ್ಯವೆಂದು ಸ್ವಲ್ಪ ಯೋಚಿಸಬೇಕಾದ ಅಗತ್ಯವಿದೆ. ಆಕಾಶ ಒಂದೇ ಇರುವಾಗ 'ಆಕಾಶಗಳು' ಎಂದು ಏಕೆ ಹೇಳಿದ್ದಾನೆ? ಆಕಾಶಗಳು ಎಷ್ಟು ಇವೆಯೆಂದು ಯೋಚಿಸಿದರೆ ಸೂರಾ 2, ಆಯತ್ 29ರಲ್ಲಿ ಹೀಗೆ ಇದೆ. **(2–29) "ದೇವರು ನಿಮಗೋಸ್ಕರ ಭೂಮಿಯಲ್ಲಿರುವ ಸಮಸ್ತ ವಸ್ತುಗಳನ್ನು ಸೃಷ್ಟಿಸಿದ್ದಾನೆ. ನಂತರ ಆಕಾಶದ ಕಡೆ ಧ್ಯಾನವನ್ನು ಮರಳಿಸಿ ತಕ್ಕ ರೀತಿಯಲ್ಲಿ ಸಪ್ತಾಕಾಶಗಳನ್ನು ನಿರ್ಮಿಸಿದ್ದಾನೆ, ಆತನು ಎಲ್ಲಾ ತಿಳಿದವನು"** ಎಂದು ಇದೆ.

(29–44) ವಾಕ್ಯದಲ್ಲಿ ಆಕಾಶಗಳೆಷ್ಟು? ಎಂದು ಬಂದಿರುವ ಪ್ರಶ್ನೆಗೆ ಏಳು ಆಕಾಶಗಳೆಂದು ಉತ್ತರ (2–29) ನೇ ವಾಕ್ಯದಲ್ಲಿ ದೊರೆತಿದೆ. ಏಳು ಆಕಾಶಗಳು ಹೊರಗೆ ಎಲ್ಲಿ ಹುಡಿಕಿದರು ಇಲ್ಲ, ಕಾಣಿಸುವುದಿಲ್ಲ, ಲೆಕ್ಕಾಚಾರ ಸಿಗುವುದಿಲ್ಲ. ಆದುದರಿಂದ ಈ ವಾಕ್ಯವನ್ನು ಸ್ಥೂಲವಾಗಿ ಹೇಳಿಕೊಳ್ಳಬಾರದು ಎಂದು ನಿರ್ಣಯಿಸಿಕೊಳ್ಳಬಹುದು. ಆದರೆ ಮುಸ್ಲಿಮ್‌ರೆಲ್ಲರೂ ಈ ವಾಕ್ಯಕ್ಕೆ ಸ್ಥೂಲವಾಗಿಯೇ ಅರ್ಥವನ್ನು ಹೇಳುತ್ತಿದ್ದಾರೆ. ಈ ವಾಕ್ಯಕ್ಕೆ ಸ್ಥೂಲವಾಗಿ ಅರ್ಥ ಹೇಳಿದರೆ ವೇಮನ ಪದ್ಯದಲ್ಲಿ ನಾಯಿಯನ್ನು, ಹಂದಿಯನ್ನು, ಆನೆಯನ್ನು ತಿಂದವನು ಗುರುವು, ಯೋಗಿ, ಜ್ಞಾನಿ ಎಂದು ಹೇಳಿದಂತಿರುತ್ತದೆ. ಹಾಗಲ್ಲದೆ ದೇವರು ಹೇಳಿದ ನಿಜ ಭಾವನೆಯಿಂದ ನೋಡಬೇಕೆಂದರೆ, ಪರಮಾರ್ಥದಿಂದ ನೋಡಬೇಕೆಂದರೆ ಈ ವಾಕ್ಯಗಳಿಗೆ ಸೂಕ್ಷ್ಮವಾದ ಅರ್ಥವನ್ನು ಹೇಳಿಕೊಳ್ಳದೆ ತಪ್ಪುವುದಿಲ್ಲ. ಹಾಗೆ ಹೇಳಿಕೊಳ್ಳದೆ ಇದರ ಅರ್ಥ ದೇವರಿಗೆ ತಿಳಿದಿದೆ ಎಂದು ಹೇಳಿದರು ದೇವರು ಯಾರೊಂದಿಗೂ ಮಾತನಾಡುವುದಿಲ್ಲ, ಆದ್ದರಿಂದ ಆ ವಿಷಯವನ್ನು ನಿನಗೆ ಹೇಳುವುದಿಲ್ಲ. ಸೂರಾ 2, ಆಯತ್ 186ನ್ನು ತೆಗೆದುಕೊಂಡು ನೋಡಿದರೆ **(2–186) "ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೆ, ನಾನು ಅವರಿಗೆ ಅತಿ ಸಮೀಪದಲ್ಲಿ ಇದ್ದೇನೆ. ಕರೆಯುವವನು ನನ್ನ ಕರೆದಾಗ ನಾನು ಆತನ ಕರೆಯನ್ನು ಕೇಳಿ ಉತ್ತರಕೊಡುತ್ತೇನೆ. ಆದ್ದರಿಂದ ಅವರು ಸರಿಯಾದ ಮಾರ್ಗ ಹೊಂದುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇ**

**ಕೆಂದು ಮತ್ತು ನನ್ನಲ್ಲಿ ವಿಶ್ವಾಸ ಹೊಂದಿರಬೇಕೆಂದು ಎಂದು ಹೇಳು"** ಎಂದು ಇದೆ. ಇಲ್ಲಿ ಈ ಮಾತಿನ ಪ್ರಕಾರ ಮನುಷ್ಯರು ಸರಿಯಾದ ಮಾರ್ಗ ಹೊಂದುವುದಕ್ಕೆ ಅಂದರೆ ದೈವಜ್ಞಾನವನ್ನು ತಿಳಿಯುವುದಕ್ಕೆ, ತಿಳಿಯಬೇಕೆನ್ನುವ ಶ್ರದ್ಧೆಯಿಂದ ನನ್ನನ್ನು ಕರೆದರೆ ನಾನು ಆತನ ಕರೆಯನ್ನು ಕೇಳಿ ಯಾವುದು ನಿಜವಾದ ಜ್ಞಾನವೊ ತಿಳಿಸುತ್ತಾ ಉತ್ತರಕೊಡುತ್ತೇನೆ. ಆಗ ನನ್ನ ಆಜ್ಞೆಯನ್ನು ಅವರು ತಪ್ಪದೆ ಅನುಸರಿಸಬೇಕು ಎಂದು ಹೇಳಿದ್ದಾನೆ. ಆದ್ದರಿಂದ ಎಲ್ಲಿಯಾದರೂ ಖುರಾನ್‌ನಲ್ಲಿನ ವಾಕ್ಯಕ್ಕೆ ಸ್ಥೂಲ ಅರ್ಥ ಸರಿಹೋಗದೆ ಹೋದರೆ, ಸೂಕ್ಷ್ಮ ಅರ್ಥಕ್ಕಾಗಿ ದೇವರನ್ನು ಕೇಳಿದರೆ **ಅವನಲ್ಲಿಯೇ ಅವನಿಗೆ ಹತ್ತಿರವಾಗಿರುವ ದೇವರು** ತಪ್ಪದೆ ಸರಿಯಾದ ಅರ್ಥದಿಂದ ಉತ್ತರಕೊಡುತ್ತಾನೆ.

ಹಾಗೆ ದೇವರನ್ನು ಕೇಳದಂತೆ ಗ್ರಂಥದಲ್ಲಿನ ಸೂಕ್ಷ್ಮವಾಕ್ಯಗಳಿಗೆ ಸ್ಥೂಲವಾಗಿ ಅರ್ಥವನ್ನು ಹೇಳಿಕೊಂಡರೆ ಜ್ಞಾನಿಗಳು ಆಗಲಾರರು. ಆದ್ದರಿಂದ ಅಂತಿಮ ದೈವಗ್ರಂಥದಲ್ಲಿನ ನಾಲ್ಕು ಭಾಗಗಳ ಅಂದರೆ ಶೇ.80 ರಷ್ಟು ಸೂಕ್ಷ್ಮವಾಕ್ಯಗಳ ಅರ್ಥಕ್ಕಾಗಿ ದೇವರನ್ನು ಕೇಳಿದರೆ ತಾನು ತಪ್ಪದೆ ಉತ್ತರ ಹೇಳುತ್ತೇನೆಂದು ದೇವರು ಆಯತ್ ರೂಪದಲ್ಲಿ ಪ್ರಜೆಗಳಿಗೆ ತಿಳಿಸಿದ್ದಾನೆ. ಆದರೂ ಮನುಷ್ಯ ಅಹಂಕಾರದಿಂದ ದೇವರು ಹೇಳಿದ ಮಾತನ್ನು ಬಿಟ್ಟು ಖುರಾನ್ ಗ್ರಂಥವನ್ನು ಸ್ವಲ್ಪವೂ ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳಲಿಲ್ಲ. ಯಾರಾದರೂ ತನ್ನ ಅಂತರಂಗದಲ್ಲಿ ದೇವರು ಹೇಳಿದ ಭಾವನೆಯನ್ನು ಖುರಾನ್ ಆಯತ್‌ಗೆ ಹೇಳಿದರೆ ಅವನನ್ನು ವಕ್ರಬುದ್ಧಿ ಇರುವವನು ಎಂದು ಹೆಸರಿಟ್ಟು ಅವನ ಮಾತನ್ನು ಲೆಕ್ಕಮಾಡದಂತಿದ್ದಾರೆ. ಹಾಗೆ ಅವನ ಮಾತನ್ನು ಲೆಕ್ಕಮಾಡದೆ ಹೋಗಿರುವುದುರಿಂದ ದೇವರ ಮಾತನ್ನೇ ಲೆಕ್ಕಮಾಡದಂತಾಗುತ್ತದೆ. ಆದ್ದರಿಂದ ಖುರಾನ್ ಗ್ರಂಥದಲ್ಲಿರುವ ಶೇ.80ರಷ್ಟು ಮುತಷಾಬಿಹಾತ್ ವಾಕ್ಯಗಳನ್ನು ಅಂದರೆ ಸೂಕ್ಷ್ಮವಾದ ವಾಕ್ಯಗಳನ್ನು ಸೂಕ್ಷ್ಮವಾಗಿಯೇ ತಿಳಿಯುವುದರಿಂದ ದೇವರು ಗ್ರಂಥರೂಪದಲ್ಲಿ ಹೇಳಿದ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಹಾಗಲ್ಲದೆ ಎಲ್ಲಾ ಸ್ಥೂಲ (ಮುಹ್ಕಮಾತ್) ವಾಕ್ಯಗಳೇ ಅಂದುಕೊಂಡರೆ ತಪ್ಪಿನಲ್ಲಿ ಕಾಲು

ಹಾಕಿದಂತಾಗುತ್ತದೆ. ಖುರಾನ್ ಗ್ರಂಥ ಶೇ.80 ರಷ್ಟು ಅರ್ಥವಾಗದೆ ಹೋಗುತ್ತದೆ. ಅಂಥವನು ಶೇಕಡ 20 ರಷ್ಟು ಜ್ಞಾನಿಯೆಂದು ಹೇಳಬಹುದು. ಹಾಗೆಯೇ ಶೇಕಡ 80ರಷ್ಟು ಅಜ್ಞಾನಿ ಎಂದು ಹೇಳಬಹುದು. ಖುರಾನ್ ಗ್ರಂಥದಲ್ಲಿನ ಆಯತ್‌ಗಳು 6236 ಇವೆ. ಅದರಲ್ಲಿ 6000 ಆಯತ್‌ಗಳನ್ನು ತೆಗೆದುಕೊಂಡು ನೋಡಿದರು ಶೇಕಡ 20% ಕ್ಕೆ 1200 ಆಗುತ್ತದೆ. ಶೇಕಡ 80% ಕ್ಕೆ 4800 ಆಯತ್‌ಗಳಾಗುತ್ತವೆ. ಖುರಾನ್‌ನನ್ನು ಸ್ಥೂಲವಾಗಿ ಅರ್ಥ ಮಾಡಿಕೊಂಡವನಿಗೆ 1200 ವಾಕ್ಯಗಳು ಮಾತ್ರ ತಿಳಿದಂತಾಗುತ್ತದೆ. ಉಳಿದ 4800 ವಾಕ್ಯಗಳು ತಿಳಿಯದಿರುವವು ಆಗುತ್ತವೆ. ಆದ್ದರಿಂದ ಖುರಾನ್ ಗ್ರಂಥದಲ್ಲಿ ಸ್ಥೂಲವಾಗಿರುವ ಅವುಗಳನ್ನು ಸ್ಥೂಲವಾಗಿಯೇ, ಸೂಕ್ಷ್ಮವಾಗಿರುವವುಗಳನ್ನು ಸೂಕ್ಷ್ಮವಾಗಿಯೇ ಅರ್ಥ ಮಾಡಿಕೊಳ್ಳಬೇಕು. ಆದರೂ ನಮ್ಮ ಮಾತನ್ನು ಮುಸ್ಲಿಮ್‌ರು ಕೇಳುವುದಿಲ್ಲವೆಂದು ಅದು ಅಲ್ಲದೆ 'ನಮ್ಮ ಖುರಾನ್ ಕುರಿತು ನಿನಗೇನು ತಿಳಿದಿದೆ?' ಎಂದು ಅನ್ನುತ್ತಾರೆಂದು ಹೇಳುತ್ತಿದ್ದೇವೆ. ಖುರಾನ್ ಗ್ರಂಥ ಸಕ್ರಮವಾಗಿ ಅರ್ಥವಾಗಬೇಕೆಂದರೆ ದೇವರೇ ಇಳಿದುಬಂದು ಹೇಳಿದರೇನೆ ಕೇಳುತ್ತಾರೆಂದು ಅಂದುಕೊಳ್ಳುತ್ತಿದ್ದೇನೆ. ಸಮಾಜದಲ್ಲಿ ಖುರಾನ್ ಗ್ರಂಥ ಶೇಕಡ 80 ರಷ್ಟು ಅರ್ಥವಾಗದೆ ಇರುವುದರಿಂದ **ದೇವರ ಬರುವಿಕೆಗೆ ಇದು ಸಮಯ ಅಲ್ಲವಾ**? ಎಂದು ಅಂದುಕೊಳ್ಳುತ್ತಿದ್ದೇವೆ.

**ಪ್ರಶ್ನೆ :– ಮೂರು ದೈವಗ್ರಂಥಗಳಲ್ಲಿ ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಮಾತ್ರ ಶೇ. 80ರಷ್ಟು ಸೂಕ್ಷ್ಮ ವಾಕ್ಯಗಳು ಇವೆಯೆಂದು ಹೇಳುತ್ತಿದ್ದಾರೆ. 20 ಪಾಲು ಸ್ಥೂಲವಾಕ್ಯಗಳು ಇವೆಯೆಂದು ಹೇಳುತ್ತಿದ್ದಾರೆ. ಉಳಿದ ಎರಡು ಗ್ರಂಥಗಳಲ್ಲಿ ಅಪರೂಪವಾಗಿ ಸೂಕ್ಷ್ಮವಾಕ್ಯಗಳು ಇವೆ. ಹೆಚ್ಚಾಗಿ ಸ್ಥೂಲ ವಾಕ್ಯಗಳೇ ಇವೆ. ನಮಗೆ ಅರ್ಥವಾಗುವಂತೆ ಖುರಾನ್‌ನಲ್ಲಿರುವ ಸ್ಥೂಲವಾಕ್ಯ ಒಂದು, ಸೂಕ್ಷ್ಮವಾಕ್ಯ ಒಂದು ಹೇಳಬೇಕೆಂದು ಕೇಳುತ್ತಿದ್ದೇವೆ.**

**ಉತ್ತರ :–** ಖುರಾನ್ ಗ್ರಂಥದಲ್ಲಿನ ಸ್ಥೂಲವಾಕ್ಯವನ್ನು ಸೂಕ್ಷ್ಮವಾಕ್ಯವನ್ನು ಒಂದೇ ಸೂರಾದಲ್ಲಿ ಪಕ್ಕಪಕ್ಕದಲ್ಲಿಯೇ ಇರುವವುಗಳನ್ನು ತೋರಿಸುತ್ತೇವೆ ನೋಡಿರಿ.

ಅಲ್‌ಬಖರಾ ಸೂರಾ 2, ಆಯತ್ 186 ಇದಕ್ಕು ಮೊದಲು ಹೇಳಿದ್ದೇವೆ. ಆದರೂ ಈಗ ಜ್ಞಾಪಕ ಮಾಡಿಕೊಳ್ಳೋಣ. **(2–186) "ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೆ ನಾನು ಅವರಿಗೆ ಅತಿ ಸಮೀಪದಲ್ಲಿ ಇದ್ದೇನೆಂದು, ಕರೆಯುವವನು ನನ್ನನ್ನು ಕರೆದಾಗ ನಾನು ಆತನ ಕರೆಯನ್ನು ಕೇಳಿ ಉತ್ತರಕೊಡುತ್ತೇನೆ. ಆದ್ದರಿಂದ ಅವನು ಸರಿಯಾದ ಮಾರ್ಗವನ್ನು ಹೊಂದುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇಕು ಮತ್ತು ನನ್ನಲ್ಲಿ ವಿಶ್ವಾಸ ಹೊಂದಿರಬೇಕು."** ಈ ವಾಕ್ಯವನ್ನು ಸೂಕ್ಷ್ಮವಾಕ್ಯವೆಂದು ಹೇಳಬಹುದು. ಅದರ ಪಕ್ಕದ ವಾಕ್ಯವೇ ಸ್ಥೂಲವಾಗಿದೆ ನೋಡಿರಿ. **(2–187) "ಉಪವಾಸದ ರಾತ್ರಿಗಳಲ್ಲಿ ನಿಮಗೆ ನಿಮ್ಮ ಪತ್ನಿಯರೊಂದಿಗೆ ರತಿಕ್ರೀಡೆ ಧರ್ಮಸಮ್ಮತ ಮಾಡಲ್ಪಟ್ಟಿದೆ. ಅವರು ನಿಮ್ಮ ವಸ್ತ್ರಗಳು, ನೀವು ಅವರ ವಸ್ತ್ರಗಳು. ವಾಸ್ತವವಾಗಿ ನೀವು ರಹಸ್ಯವಾಗಿ ಆತ್ಮ ದ್ರೋಹಕ್ಕೆ ಸಿದ್ಧರಾಗುತ್ತಿದ್ದೀರೆನ್ನುವ ವಿಷಯ ಅಲ್ಲಾಹ್‌ಗೆ ತಿಳಿದಿದೆ. ಆದ್ದರಿಂದ ಆತನು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿದ್ದಾನೆ. ಇನ್ನೂ ನಿಮ್ಮನ್ನು ಕ್ಷಮಿಸಿದ್ದಾನೆ. ಇನ್ನು ಮುಂದೆ ನಿಮ್ಮ ಪತ್ನಿಯರೊಂದಿಗೆ ಸಂಭೋಗ ಮಾಡಿರಿ ಮತ್ತು ಅಲ್ಲಾಹ್ ನಿಮಗೋಸ್ಕರ ಬರೆದಿರುವುದನ್ನು ಕೋರಿಕೊಳ್ಳಿ. ಉದಯಕಾಲದ ಬಿಳಿರೇಖೆಗಳು ರಾತ್ರಿ ಕಪ್ಪು ಚಾರೆಗಳಿಂದ ಸ್ಪಷ್ಟಪಡುವವರೆಗು ನೀವು ತಿನ್ನಿರಿ, ಕುಡಿಯಿರಿ, ಆ ನಂತರ ಕತ್ತಲಾಗುವವರೆಗು ನಿಮ್ಮ ಉಪವಾಸವನ್ನು ಪೂರ್ತಿ ಮಾಡಿರಿ. ಆದರೆ ಮಜೀದ್‌ಗಳಲ್ಲಿ "ಏತೆಕಾಫ್" ಮಾಡುವಾಗ ನೀವು ನಿಮ್ಮ ಸ್ತ್ರೀಯರೊಂದಿಗೆ ಸಂಭೋಗಿಸಬೇಡಿರಿ. ಇವು ಅಲ್ಲಾಹ್ ಏರ್ಪಡಿಸಿದ ಹದ್ದುಗಳು. ಆದ್ದರಿಂದ ಉಲ್ಲಂಘಿಸುವ ಉದ್ದೇಶದಿಂದ ಇವುಗಳನ್ನು ಸಮೀಪಿಸಬೇಡಿ. ಈ ವಿಧವಾಗಿ ಅಲ್ಲಾಹ್ ತನ್ನ ಆಜ್ಞೆಗಳನ್ನು ಸ್ಪಷ್ಟ ಮಾಡುತ್ತಿದ್ದಾನೆ. ಬಹುಶಃ ಅವರು ಭಯಭಕ್ತಿ ಹೊಂದಿರುತ್ತಾರೆಂದು ಹೇಳಿದ್ದಾರೆ."** ಈ ವಾಕ್ಯ ಪೂರ್ತಿ ಸ್ಥೂಲವಾಗಿದೆ. 186ನೇ ಸೂಕ್ಷ್ಮವಾಕ್ಯ ಬಹಳ ಮುಖ್ಯವಾಗಿ ಕಾಣಿಸುತ್ತಿದೆ. 187ನೇ ಸ್ಥೂಲವಾಕ್ಯದ ಹತ್ತಿರಕ್ಕೆ ಬಂದು ನೋಡಿದರೆ ಗಂಡಹೆಂಡತಿ ಸಂಸಾರ ಮಾಡುವುದಾಗಲಿ, ಅಥವಾ ಆಹಾರ ಪಾನೀಯಗಳು ತಿನ್ನುವುದು, ಕುಡಿಯುವುದಾಗಲಿ ಹೊರಗೆ ಪ್ರಪಂಚ ವಿಷಯವಾಗುತ್ತದೆ. 186ನೇ ಆಯತ್ ಪೂರ್ತಿ ಆಧ್ಯಾತ್ಮಿಕ ಸಂಬಂಧವಾದುದಾಗಿ

ಇದೆ. 187ನೇ ಆಯತ್ ಪೂರ್ತಿ ಪ್ರಪಂಚ ಸಂಬಂಧವಾಗಿ ಇದೆ. 186ನೇ ಆಯತ್‌ನಲ್ಲಿ ಅಂತರ್ಮುಖ ಆಧ್ಯಾತ್ಮಿಕ ಇದೆ. 187ನೇ ಆಯತ್‌ನಲ್ಲಿ ಬಾಹ್ಯಮುಖ ಪ್ರಪಂಚ ಸಂಬಂಧ ವಿಷಯ ಇದೆ. 186ನೇ ಆಯತ್‌ನಲ್ಲಿ ಎಷ್ಟೋ ಸೂಕ್ಷ್ಮತೆ ಇದೆ. **"ನನ್ನ ದಾಸರು"** ಎನ್ನುವ ಪದದಿಂದ ಜಾಗ್ರತೆಯಾಗಿ ಅರ್ಥ ಮಾಡಿಕೊಳ್ಳಬೇಕಾಗಿರುತ್ತದೆ. **"ಅತಿ ಸಮೀಪದಲ್ಲಿ"** ಎಂದರೆ ಎಷ್ಟೋ ಜಾಗ್ರತೆಯಾಗಿ ಅರ್ಥಮಾಡಿಕೊಳ್ಳಬೇಕು. ದೇವರನ್ನು ಹೇಗೆ ಅರ್ಥಿಸಬೇಕು? ದೇವರು ಅರ್ಥಿಸಿದವನ ಮಾತನ್ನು ಹೇಗೆ ಕೇಳುತ್ತಾನೆ? ಕೇಳಿದ ನಂತರ ಹೇಗೆ ಸಮಾಧಾನ ಕೊಡುತ್ತಾನೆ? ದೇವರನ್ನು ಕೇಳಬೇಕಾದ ವಿಷಯಗಳು ಯಾವುವು? ಯಾವ ವಿಷಯಗಳು ಕೇಳಿದಾಗ ಆತನು ಉತ್ತರ ಹೇಳುತ್ತಾನೆ? ಯಾವ ವಿಷಯಗಳಿಗೆ ಹೇಳುವುದಿಲ್ಲ? ಎಂದು ಎಷ್ಟೋ ಸೂಕ್ಷ್ಮ ಬುದ್ಧಿಯಿಂದ ಆಲೋಚಿಸಬೇ ಕಾಗಿರುತ್ತದೆ. ಅದೇ 187ನೇ ಆಯತ್‌ನಲ್ಲಿ ಗಂಡಹೆಂಡರ ಶೃಂಗಾರ ಸಂಬಂಧ ವಾದ ವಿಷಯ ಹೊರತು ಏನೂ ಇಲ್ಲ. ಅದನ್ನು ಕೂಡಾ ಅರ್ಥ ಮಾಡಿಕೊಳ್ಳದ ಮನುಷ್ಯ ಅದನ್ನು ಬಿಟ್ಟು ಇನ್ನೊಂದನ್ನು ಆಚರಿಸುತ್ತಿದ್ದಾನೆ. ಯಾವುದನ್ನು ಬಿಟ್ಟು, ಯಾವುದನ್ನು ಆಚರಿಸಿದರೂ ಆ ಎರಡು ವಿಷಯಗಳು ದೈವಿಕವಾದವು ಅಲ್ಲವೇ ಅಲ್ಲ. ಆ ಎರಡು ವಿಷಯಗಳಲ್ಲಿ ಆಧ್ಯಾತ್ಮಿಕ ಸ್ವಲ್ಪವಾದರೂ ಇಲ್ಲ. ಅಂತಹ ಆಚರಣೆಗಳಿಂದ ಮನುಷ್ಯನಿಗೆ ಆರೋಗ್ಯ ಚೆನ್ನಾಗಿರುತ್ತದೇನೋ ಆದರೆ ಜ್ಞಾನದಲ್ಲಿ ಯಾವ ಲಾಭವು ಇರುವುದಿಲ್ಲ.

ಖುರಾನ್ ಗ್ರಂಥದಲ್ಲಿ ಕೆಲವು ಮುತಷಾಬಿಹಾತ್ (ಸೂಕ್ಷ್ಮವಾದ) ವಾಕ್ಯಗಳು ಇವೆ. ಆರನೇ ಸೂರಾ 95ನೇ ಆಯತ್‌ವೊಂದರ ಭಾವನೆ ಸ್ವಲ್ಪ ಸೂಕ್ಷ್ಮ, ಸ್ವಲ್ಪ ಸ್ಥೂಲವಾಗಿದೆ. ಇದು ಪೂರ್ತಿ ಸೂಕ್ಷ್ಮವಾದ ವಿಷಯ ಕೂಡಾ ಅಲ್ಲ. ಆ ವಾಕ್ಯದಲ್ಲಿ ಸ್ವಲ್ಪ ಸೂಕ್ಷ್ಮತೆಗೆ ಅದು ಅರ್ಥವಾಗದ ವಿಧವಾಗಿ ಇದ್ದುಹೋಗಿದೆ. ಈ ವಾಕ್ಯದ ಹತ್ತಿರ ಮನುಷ್ಯರು ಮುಖ್ಯವಾಗಿ ಮುಸ್ಲಿಮ್‌ರು ಪೂರ್ತಿ ತಪ್ಪು ಭಾವವನ್ನು ಹೊಂದಿದ್ದಾರೆ. ಈ ವಾಕ್ಯವೊಂದರ ಭಾವನೆ ಸ್ವಲ್ಪವೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಈಗಲೇ ಅಲ್ಲ ಸಾವಿರ

ವರ್ಷಗಳು ಶಾಸ್ತ್ರಪರಿಶೋಧನೆ ಮಾಡಿದರೂ ಅರ್ಥವಾಗುವುದಿಲ್ಲ. ಆದುದರಿಂದ ಈ ವಾಕ್ಯದ ಕೊನೆಯಲ್ಲಿ ದೇವರು ಮನುಷ್ಯರನ್ನು ಎಚ್ಚರಿಸುತ್ತಾ, ನೀವೇಕೆ ಸತ್ಯದಿಂದ ದಾರಿತಪ್ಪಿ ಹೋಗುತ್ತಿದ್ದೀರೆಂದು ಪ್ರಶ್ನಿಸಿದ್ದಾನೆ. ಹಾಗೆ ದೇವರೇ ಕೇಳಿದರೂ ಈ ವಾಕ್ಯದ ಹತ್ತಿರ ಜಾಗ್ರುತರಾಗದೆ ನಮಗೆ ತಿಳಿದಿದೆಯೆಂದು ಅಂದುಕೊಳ್ಳುತ್ತಿದ್ದಾರೆ. ಇದೇ ವಾಕ್ಯವೇ ಭಗವದ್ಗೀತೆಯಲ್ಲಿ ಸಾಂಖ್ಯಯೋಗ 22ನೇ ಶ್ಲೋಕದಲ್ಲಿ ಇದೆ. ಆದರೆ ಅಲ್ಲಿ ಹಿಂದೂಗಳಿಗೆ ಆ ಶ್ಲೋಕವೊಂದರ ಭಾವವು ಅರ್ಥವಾಗಲಿಲ್ಲ. ಅರ್ಥವಾಗಲಿಲ್ಲ ಎನ್ನುವ ವಿಷಯ ಕೂಡಾ ಅವರು ನೋಡಿಕೊಳ್ಳದೆ ಸುಮ್ಮನೆ ಹೇಳುತ್ತಾಹೋಗಿದ್ದಾರೆ. ನನಗೆ ತಿಳಿದು ಈ ವಾಕ್ಯ ಬೈಬಲ್‌ನಲ್ಲಿ ಹೇಳಲಿಲ್ಲ. ಭಗವದ್ಗೀತೆ, ಖುರಾನ್ ಗ್ರಂಥಗಳಲ್ಲಿ ಮಾತ್ರ ಇದೆ. ಆದರೆ ಅದು ಜಟಿಲವಾದ ಜ್ಞಾನ ವಿಷಯವೆಂದು ಗ್ರಹಿಸದವರೆಲ್ಲರೂ ಸುಲಭವಾಗಿ ಹೇಳಿಕೊಳ್ಳುತ್ತಾ ಹೋಗಿದ್ದಾರೆ. ಆದ್ದರಿಂದ ಖುರಾನ್ ಗ್ರಂಥದಲ್ಲಿ ದೇವರು ಈ ವಾಕ್ಯದ ಹತ್ತಿರ **ಸತ್ಯವನ್ನು ಬಿಟ್ಟು ನೀವೆಲ್ಲಿ ಹೋಗುತ್ತಿದ್ದೀರೆಂದು ಮನುಷ್ಯರನ್ನು ಪ್ರಶ್ನಿಸುವುದು ನಡೆದಿದೆ.** ಆದರೂ ಮನುಷ್ಯ ಹಿಂತಿರುಗಿ ಅದರ ಅರ್ಥವೇನೆಂದು ನೋಡಲಿಲ್ಲ. ತನಗೆ ತಿಳಿದಿರುವುದು ಸತ್ಯವೇ ಎಂದು ಅಂದುಕೊಂಡಿದ್ದಾನೆ. ಈ ವಾಕ್ಯದಲ್ಲಿ ಪ್ರಶ್ನಿಸಿದರೇ ಅದಕ್ಕೆ ಯಾರೂ ಉತ್ತರವನ್ನು ಹೇಳಲಾರರು.

ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಇಂತಹ ಕಷ್ಟವಾದ, ಯಾರಿಗೂ ಅರ್ಥವಾಗದ ಸೂಕ್ಷ್ಮವಾದ ಭಾವನೆಯಿಂದ ಕೂಡಿಕೊಂಡ ವಾಕ್ಯಗಳು ಬಹಳ ಇವೆ. ಅಂತಹ ಕಡೆಯೆಲ್ಲ ಮನುಷ್ಯ ಆ ವಾಕ್ಯಗಳಿಗೆ ತಪ್ಪು ಭಾವನೆಯನ್ನು ಸೇರಿಸಿಕೊಂಡು ಸ್ಥೂಲವಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಆದರೆ ಕೆಲವುಕಡೆ ದೇವರೇ ನೀನು ತಪ್ಪುದಾರಿ ಹಿಡಿದಿದ್ದೀಯಾ ಎಂದು ಎಚ್ಚರಿಸುತ್ತಾ ವಾಕ್ಯದ ಕೊನೆಯಲ್ಲಿ ಎಚ್ಚರಿಕೆಗಳು ಮಾಡಿದಂತೆ ಕೆಲವು ಮಾತುಗಳನ್ನು ಹೇಳಿದ್ದಾನೆ. 6ನೇ ಸೂರಾ, 99ನೇ ಆಯತ್ ಕೊನೆಯಲ್ಲಿ ಇವುಗಳಲ್ಲಿ ವಿಶ್ವಾಸಿಸುವವರಿಗೆ ಸೂಚನೆಗಳಿವೆಯೆಂದು ಹೇಳಿದ್ದಾನೆ. ಇಲ್ಲಿ ಕುರುಡರಂತೆ ಅರ್ಥ ಮಾಡಿ

ಕೊಳ್ಳಬೇಡ. **ಇದರಲ್ಲಿ ಎಷ್ಟೋ ಸೂಚನೆಗಳಿವೆ. ಜಾಗೃತರಾಗಿ ನೋಡಿರೆಂದು ಅದರ ಅರ್ಥ.** (36–68) ವಾಕ್ಯದ ಕೊನೆಯಲ್ಲಿ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎನ್ನುವ ಭಾವನೆಯನ್ನು ವ್ಯಕ್ತ ಮಾಡುತ್ತಾ **ಆದರೂ ಅವರು ಅರ್ಥ ಮಾಡಿಕೊಳ್ಳುವುದಿಲ್ಲವೇನು**? ಎಂದು ಹೇಳಿದ್ದಾನೆ. ಹಾಗೆಯೇ (29–44) ಆಯತ್ ಕೊನೆಯಲ್ಲಿ ಒಂದು ವಾಕ್ಯವನ್ನು ಹೇಳಿ ಮನುಷ್ಯರು ತಪ್ಪಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾರೆನ್ನುವಂತೆ **ನೋಡಿದರೆ ಇದರಲ್ಲಿ ಮಹೋನ್ನತ ನಿದರ್ಶನ ದೊರೆಯುತ್ತದೆ** ಎಂದು ಹೇಳಿದ್ದಾನೆ. (39–42) ವಾಕ್ಯದ ಕೊನೆಯಲ್ಲಿ ಅಲ್ಲಿ ಹೇಳಿದ ವಿಷಯವನ್ನು ಮನುಷ್ಯ ಸರಿಯಾಗಿ ಅರ್ಥ ಮಾಡಿಕೊಳ್ಳದಿರುವುದರಿಂದ ಈ ವಿಧವಾಗಿ ಎಚ್ಚರಿಸಿ ಹೇಳಿದ್ದಾನೆ. **ಇದರಲ್ಲಿ ಆಲೋಚಿಸುವವರಿಗೆ ಉತ್ತಮ ಸೂಚನೆಗಳಿವೆ.** (21–7) ಆಯತ್ ಕೊನೆಯಲ್ಲಿ **ನಿಮಗೆ ತಿಳಿಯದೆ ಹೋದರೆ ತಿಳಿದ ಜ್ಞಾನಿಗಳನ್ನು ಕೇಳಿ ತಿಳಿದುಕೊಳ್ಳಿ** ಎಂದು ಇದೆ. (16–65) ರಲ್ಲಿ **ಕೇಳುವುದಕ್ಕೆ ಇದರಲ್ಲಿ ನಿದರ್ಶನೆ ಇದೆ.** ಎಂದು ಹೇಳಿದ್ದಾನೆ. (10–34) ವಾಕ್ಯದ ಕೊನೆಯಲ್ಲಿ ಪುನರ್ಜನ್ಮಗಳ ವಿಷಯ ಅರ್ಥವಾಗಲಿಲ್ಲವೆಂದು ಎಚ್ಚರಿಸುತ್ತಾ, ಇರುವ ಪುನರ್ಜನ್ಮಗಳನ್ನು ಇಲ್ಲವೆಂದು ಹೇಳುತ್ತಿದ್ದಾರೆನ್ನುವ ಕೋಪದಿಂದ ಹೀಗೆ ಹೇಳಿದ್ದಾನೆ. **ನೀವು ಸತ್ಯದಿಂದ ಹೇಗೊ ದೂರವಾಗುತ್ತಾ ಹೋಗುತ್ತಿದ್ದೀರ**? ಎಂದು ಹೇಳಿದರೂ ಮನುಷ್ಯ ಮಾತ್ರ ಅದೇ ಅಸತ್ಯದೊಳಗೆ ಹೋಗುತ್ತಿದ್ದಾನೆ. (67–3) ಇಲ್ಲಿ ಕೂಡಾ ಸೃಷ್ಟಿ ವಿಷಯ ಮನುಷ್ಯನಿಗೆ ಸರಿಯಾಗಿ ಅರ್ಥ ವಾಗಲಿಲ್ಲವೆಂದು ಹೇಳುತ್ತಾ ಹೀಗೆ ಹೇಳಿದ್ದಾನೆ. **ಬೇಕೆಂದರೆ ಮತ್ತೊಂದುಸಲ ದೃಷ್ಠಿಯನ್ನು ಹರಿಸಿ ನೋಡು ನಿನಗೇನಾದರೂ ಲೋಪ ಕಾಣಿಸುತ್ತದೇನೊ**? (30–21) **ನಿಶ್ಚಯವಾಗಿ ಆಲೋಚಿಸುವವರಿಗಾಗಿ ಇದರಲ್ಲಿ ಎಷ್ಟೋ ಸೂಚನೆಗಳಿವೆ** (30–24) **ಇದರಲ್ಲಿ ಕೂಡಾ ಬುದ್ಧಿ ಇರುವ ಜೀವಿಗಳಿಗೋಸ್ಕರ ಎಷ್ಟೋ ನಿದರ್ಶನೆಗಳಿವೆ** ಎಂದು ಹೇಳಿದ್ದಾನೆ. ಈ ವಿಧವಾಗಿ ಅಲ್ಲಾಹ್ (ದೇವರು) ಹೇಳಿದ ವಾಕ್ಯಗಳನ್ನು ಮನುಷ್ಯರು ತಪ್ಪಾಗಿ ಅರ್ಥ ಮಾಡಿಕೊಂಡಾಗ, ಆ ವಾಕ್ಯದ ಕೊನೆಯಲ್ಲಿಯೇ ಮನುಷ್ಯರನ್ನು ದೇವರು ನೀವು ತಪ್ಪುದಾರಿ ಹಿಡಿಯುತ್ತಿದ್ದೀರೆನ್ನುವಂತೆ ಯಾವುದೋ ವಿಧವಾಗಿ

ಎಚ್ಚರಿಸುತ್ತಾ ಬಂದಿದ್ದಾನೆ. ಆದರೂ ಕೆಲವರು ದೇವರು ಹೇಳಿದರೂ ಸ್ವಲ್ಪವೂ ಹಿಂದಿರುಗಿ ನೋಡದಂತೆ ತಮ್ಮದು ಜ್ಞಾನಮಾರ್ಗವೇ ಎಂದು ಅಂದು ಕೊಳ್ಳುತ್ತಿದ್ದಾರೆ.

**ಪ್ರಶ್ನೆ :– ತೌರಾತ್ ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ನೀವು ಹೇಳುತ್ತಿದ್ದೀರ. ಹಾಗಿರುವಾಗ ಮೂರು ಗ್ರಂಥಗಳಲ್ಲಿ ಯಾವುದೋ ಒಂದು ಗ್ರಂಥವನ್ನು ಓದಿದರೂ ಸರಿಹೋಗುತ್ತದೆ. ಮೂರು ಗ್ರಂಥಗಳನ್ನು ಓದಬೇಕಾದ ಅವಶ್ಯಕತೆ ಇರುವುದಿಲ್ಲ. ಆದರೆ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ 5, ಆಯತ್ 68ರಲ್ಲಿ ಬರೆದಿರುವುದನ್ನು ನೋಡಿದರೆ (5–68) "ತೌರಾತ್ (ಭಗವದ್ಗೀತೆ), ಇಂಜೀಲು (ಬೈಬಲ್) ಈಗ ದೇವರು ನಿಮ್ಮ ಹತ್ತಿರಕ್ಕೆ ಕಳಿಸಿದ ಈ ಖುರಾನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಲ್ಲಿ ಇಲ್ಲದಂತೆ" ಎಂದು ಹೇಳಿದ್ದಾರೆ. ಇಲ್ಲಿ "ಮೂರು ಗ್ರಂಥಗಳನ್ನು ಓದದೆ, ಮೂರು ಗ್ರಂಥಗಳನ್ನು ಅನುಸರಿಸದೇ" ಎಂದು ಹೇಳಿದ್ದಾರೆ. ನಾವು ಈಗ ಒಂದು ಗ್ರಂಥವನ್ನು ಓದಿದರೂ ಸರಿಹೋಗುತ್ತದಾ? ಅಥವಾ ಮೂರು ಗ್ರಂಥಗಳನ್ನು ಓದಬೇಕಾಗಿದ್ದೇನಾ?**

**ಉತ್ತರ :–** 5–68ನೇ ಆಯತ್‌ನಲ್ಲಿ ಹೇಳಿದಂತೆ ಮೂರು ಗ್ರಂಥಗಳು ಓದಬೇಕಾಗಿದ್ದೆ. ಏಕೆಂದರೆ! ಭಗವದ್ಗೀತೆಯಲ್ಲಿ ಹೇಳಿದ ಒಂದು ವಾಕ್ಯ ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳಲ್ಲಿ ಬರಲಿಲ್ಲ. ನಂತರ ಅದೇ ವಾಕ್ಯ ಖುರಾನ್ ಗ್ರಂಥದಲ್ಲಿ ಬಂದಿದೆ. ಮಧ್ಯ ಗ್ರಂಥವಾದ ಬೈಬಲ್‌ನಲ್ಲಿ ಮನುಷ್ಯನಿಗೆ ಬೇಕಾಗಿರುವವು ನಾಲ್ಕು ಸುವಾರ್ತೆಗಳು ಮಾತ್ರವೆ. ನಾಲ್ಕು ಸುವಾರ್ತೆಗಳಲ್ಲಿ 3708 ವಾಕ್ಯಗಳು ಇರುವಾಗ ಅವುಗಳಲ್ಲಿ ಮುಖ್ಯವಾದವು, ಮಧ್ಯ ಸಾರಾಂಶ ಇರುವವು ಸುಮಾರು 3000 ವಾಕ್ಯಗಳಾಗಿ ಹೇಳಿಕೊಳ್ಳಬಹುದು. ಭಗವದ್ಗೀತೆಯಲ್ಲಿ ಕಲ್ಪಿತ ಶ್ಲೋಕಗಳನ್ನು ಬಿಟ್ಟರೆ, ಹಾಗೆ ಕೆಲವು ವರ್ಣನಾ ಶ್ಲೋಕಗಳನ್ನು ಬಿಟ್ಟರೆ ಭಗವದ್ಗೀತೆಯಲ್ಲಿ ಮುಖ್ಯವಾದ ಶ್ಲೋಕಗಳು ಸುಮಾರು 600 ಇರಬಹುದು. ಹಾಗೆಯೇ ಖುರಾನ್ ಗ್ರಂಥದಲ್ಲಿ 6236 ವಾಕ್ಯಗಳು ಇರುವಾಗ ಅದರಲ್ಲಿ ಮುಖ್ಯವಾದವು ಸುಮಾರು 6000ದ ವರೆಗು ಇವೆ. ಈ ವಿಧವಾಗಿ ಲೆಕ್ಕಿಸಿದರೆ.

| | | | |
|---|---|---|---|
| **ಭಗವದ್ಗೀತೆಯಲ್ಲಿ** | **700** | **ಶ್ಲೋಕಗಳು** | **600** |
| **ಬೈಬಲ್‌ನಲ್ಲಿ ಸುವಾರ್ತೆಗಳಲ್ಲಿ** | **3708** | **ವಾಕ್ಯಗಳಿಗೆ** | **3000** |
| **ಖುರಾನ್‌ನಲ್ಲಿ** | **6236** | **ವಾಕ್ಯಗಳಿಗೆ** | **6000** |

ತಪ್ಪದೇ ವಿವರಣೆ ತೆಗೆದುಕೊಂಡು ನೋಡಬೇಕು. ಹಾಗೆ ನೋಡಿದರೆ ಮೂರು ಗ್ರಂಥಗಳಲ್ಲಿ ಕೆಲವು ಅರ್ಥವಾಗದೆ ಇರುವವುಗಳನ್ನು ಬಿಟ್ಟರೂ ಖುರಾನ್‌ನಲ್ಲಿ 6000, ಬೈಬಲ್ 3000, ಭಗವದ್ಗೀತೆಯಲ್ಲಿ 600 ವಾಕ್ಯಗಳನ್ನು ನೋಡಿದರೆ ಭಗವದ್ಗೀತೆಯಲ್ಲಿರುವ 600 ಶ್ಲೋಕಗಳ ಸಾರಾಂಶಗಳು ಎಲ್ಲ ಖುರಾನ್‌ಗಳಲ್ಲಿ ಇದ್ದರೂ ಕೆಲವು ಬೈಬಲ್‌ನಲ್ಲಿ ಇಲ್ಲ. ಬೈಬಲ್‌ನಲ್ಲಿರುವವು ಖುರಾನ್‌ನಲ್ಲಿ ಇಲ್ಲ. ಭಗವದ್ಗೀತೆಯಲ್ಲಿ ಇರುವವು ಉಳಿದ ಎರಡು ಗ್ರಂಥಗಳಲ್ಲಿ ಕೆಲವು ಕಡಿಮೆ ಇವೆ. ಆದುದರಿಂದ ಮೂರು ಗ್ರಂಥಗಳು ಓದಿದರೆ ಎಲ್ಲಾ ಧರ್ಮಗಳು ತಿಳಿಯುತ್ತವೆಂದು ಖುರಾನ್‌ನಲ್ಲಿ 5–68 ರಲ್ಲಿ ಹೇಳಿದ್ದಾರೆ. **ಪುನರ್ಜನ್ಮಗಳನ್ನು** ಕುರಿತು ಭಗವದ್ಗೀತೆಯಲ್ಲಿರುವುದೇ ಉಳಿದ ಎರಡು ಗ್ರಂಥಗಳಲ್ಲಿ ಇದೆ. ಆದರೆ ಅವು ಇರುವಂತೆ ಬಹಳಜನರಿಗೆ ತಿಳಿಯದಿರುವುದರಿಂದ ಮತ್ತು ಅರ್ಥ ವಾಗದಿರುವುದರಿಂದ ಭಗವದ್ಗೀತೆಯಲ್ಲಿನ ಜ್ಞಾನ ಖುರ್‌ಆನ್‌ನಲ್ಲಿ ಇಲ್ಲ ಎನ್ನುತ್ತಿದ್ದಾರೆ. ಹಾಗೆಯೇ ಬೈಬಲ್‌ನಲ್ಲಿ ಇಲ್ಲ ಎನ್ನುತ್ತಿದ್ದಾರೆ. ಯೋಚನೆಯಿಂದ ಬುದ್ಧಿಯನ್ನು ಉಪಯೋಗಿಸಿ ನೋಡುವುದಾದರೆ ಭಗವದ್ಗೀತೆಯಲ್ಲಿನ ಪುನರ್ಜನ್ಮ ವಿಷಯಗಳು ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಇರುವಂತೆ ತಿಳಿಯುತ್ತದೆ.

ಭಗವದ್ಗೀತೆಯಲ್ಲಿನ ವಿಷಯಗಳಲ್ಲಿ ಯಾವುದಾದರೂ ಒಂದು ಗ್ರಂಥದಲ್ಲಿ ಕಡಿಮೆ ಇರುತ್ತದೆ. ಒಂದುವೇಳೆ ಇದ್ದರೂ ಅರ್ಥವಾಗದ ಸ್ಥಿತಿಯಲ್ಲಿ ಇರುತ್ತಾನೆ. ಆದುದರಿಂದ ಮೂರು ಗ್ರಂಥಗಳು ಓದುವುದರಿಂದ ಆಚರಿಸುವುದರಿಂದ ಎಲ್ಲಿಯೋ ಒಂದುಕಡೆ ಆ ವಿಷಯ ಅರ್ಥವಾಗುತ್ತದೆ. ಉದಾಹರಣೆಗೆ ಭಗವದ್ಗೀತೆಯಲ್ಲಿ **'ಕರ್ಮಯೋಗ'** ಎನ್ನುವ ಜ್ಞಾನ ಬಹಳ ಮುಖ್ಯವಾದುದು. ಅಂದರೆ ಮನುಷ್ಯ ಜೀವನದಲ್ಲಿ ಬಹಳ ಮುಖ್ಯವಾದುದೆಂದು ಅರ್ಥ. ಆದರೆ ಭಗವದ್ಗೀತೆಯಲ್ಲಿ ಹೇಳಿದಷ್ಟು ವಿವರವಾಗಿ ಉಳಿದ ಎರಡು

ಗ್ರಂಥಗಳಲ್ಲಿ ಅರ್ಥವಾಗುವುದಿಲ್ಲ. ಒಟ್ಟಾರೆ ಉಳಿದ ಎರಡು ಗ್ರಂಥಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿದ ಕರ್ಮಯೋಗ ಇದೆ. ಆದರೆ ಅದು ಎರಡು ಗ್ರಂಥಗಳಲ್ಲಿ ಅರ್ಥವಾಗದ ವಿಧವಾಗಿ ಇರುವುದರಿಂದ, ಕರ್ಮಯೋಗ ಬೈಬಲ್‌ನಲ್ಲಿಯೂ, ಖುರಾನ್‌ನಲ್ಲಿಯೂ ಇಲ್ಲವೆಂದುಕೊಳ್ಳುತ್ತಾರೆ. ಬೈಬಲ್‌ನಲ್ಲಿ 66 ಪಾಠಗಳಿರುವಾಗ ಅದರಲ್ಲಿ ಮಧ್ಯದಲ್ಲಿರುವ ನಾಲ್ಕು ಸುವಾರ್ತೆಗಳೇ ನಮಗೆ ಮುಖ್ಯವೆಂದು ಹೇಳಿಕೊಂಡಿದ್ದೇವೆ. ನಾಲ್ಕು ಸುವಾರ್ತೆಗಳಲ್ಲಿ ಯೇಸು ಪ್ರೊಂದರ ಜೀವನವನ್ನು ಹೇಳಿದ್ದರೂ ಒಂದು ಸುವಾರ್ತೆಯಲ್ಲಿರುವ ವಿಷಯ ಮತ್ತೊಂದು ಸುವಾರ್ತೆಯಲ್ಲಿ ಇರುತ್ತದೆಂದು ನಂಬಿಕೆಯಿಲ್ಲ. ಮೂರು ಸುವಾರ್ತೆಗಳಲ್ಲಿ ಇಲ್ಲದ ವಿಷಯವು ಒಂದು ಸುವಾರ್ತೆಯಲ್ಲಿ ಇರಬಹುದು ಹಾಗೆಯೇ ಮೂರು ಸುವಾರ್ತೆಗಳಲ್ಲಿ ಇರುವ ವಿಷಯ ಒಂದು ಸುವಾರ್ತೆಯಲ್ಲಿ ಇಲ್ಲದಿರಬಹುದು ಆದುದರಿಂದ ಸುವಾರ್ತೆಗಳ ಎಲ್ಲ ವಿಷಯಗಳು ತಿಳಿಯುವುದಕ್ಕೆ ನಾಲ್ಕು ಸುವಾರ್ತೆಗಳನ್ನು ಓದಬೇಕಾಗಿದ್ದೆ. ನಾಲ್ಕು ಸುವಾರ್ತೆಗಳು ಓದದಿದ್ದರೆ ಯಾವುದೋ ಒಂದು ವಿಷಯ ತಿಳಿಯದೆ ಹೋಗ ಬಹುದು. ಇಲ್ಲವೆ ಅರ್ಥವಾಗದೆ ಇರಬಹುದು.

ಅದೇ ವಿಧವಾಗಿ ಮೂರು ಗ್ರಂಥಗಳಲ್ಲಿ ಒಂದೇ ವಿಷಯ ಇರಬಹುದು. ಇರದೆಹೋಗಬಹುದು. ಇದ್ದರೂ ಅರ್ಥ ಆಗಬಹುದು. ಅರ್ಥ ಆಗದಿರಬಹುದು. ಆದ್ದರಿಂದ ಮೂರು ಗ್ರಂಥಗಳು ಓದುವುದರಿಂದ ಆ ವಿಷಯ ಎಲ್ಲಿಯೋ ಒಂದುಕಡೆಯಾದರೂ ಅರ್ಥವಾಗುತ್ತದೆ. ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ ಹೇಳಿದ ಜ್ಞಾನವನ್ನೇ ಸುವಾರ್ತೆ ಬೈಬಲ್‌ನಲ್ಲಿ ಮತ್ತಾಯ ಐದನೇ ಅಧ್ಯಾಯ 28ನೇ ವಚನದಲ್ಲಿ ಹೇಳಿದ್ದಾರೆ. ಆದರೆ ಅದೇ ಇದುಯೆಂದು ಬೈಬಲ್ ನೋಡಿದವರಿಗೆ ತಿಳಿದಿಲ್ಲ. ಬೈಬಲ್ ಮತ್ತಾಯ 5–28ರಲ್ಲಿ ಇರುವ ವಿಷಯವೇ ಭಗವದ್ಗೀತೆಯಲ್ಲಿ ಮೋಕ್ಷಸನ್ಯಾಸ ಯೋಗದಲ್ಲಿ 17ನೇ ಶ್ಲೋಕವಾಗಿ ಇದೆಯೆಂದು ಭಗವದ್ಗೀತೆ ಓದಿದವರಿಗೆ ತಿಳಿಯುತ್ತದೆ. ಇನ್ನು ಖುರಾನ್ ವಿಷಯಕ್ಕೆ ಬಂದರೆ ಏನಾದರೆ ಮೋಕ್ಷಸನ್ಯಾಸ ಯೋಗದಲ್ಲಿ

17ನೇ ಶ್ಲೋಕದಲ್ಲಿ ಇದೆಯೋ, ಹಾಗೆ ಮತ್ತಾಯ ಸುವಾರ್ತೆ 5ರಲ್ಲಿ 28ನೇ ವಚನದಲ್ಲಿ ಏನಾದರೆ ಇದೆಯೋ ಅದೇ ಖುರಾನ್ ಗ್ರಂಥದಲ್ಲಿ ಸೂರಾ ಆರರಲ್ಲಿ ಆಯತ್ 102ರಲ್ಲಿ ಇದೆಯೆಂದು ತಿಳಿದಿಲ್ಲ. ಒಟ್ಟಾರೆ ಮೂರು ಗ್ರಂಥಗಳಲ್ಲಿ ಒಂದೇ ವಿಷಯ ಇದೆಯೆನ್ನುವ ವಿಷಯ ಮೂರು ಮತದವರಿಗೂ ತಿಳಿದಿಲ್ಲ. ಆದುದರಿಂದ ಮೂರು ಗ್ರಂಥಗಳನ್ನು ಓದಿದರೆ ಅಲ್ಲಿರುವ ಜ್ಞಾನ ಯಾವುದೋ ಒಂದುಕಡೆಯಾದರೂ ಅರ್ಥವಾಗಬಲ್ಲದು. ಹಾಗಲ್ಲದೆ ಒಂದೇ ಗ್ರಂಥ ಓದಿದರೂ ಅದರಲ್ಲಿ ಉಳಿದ ಎರಡು ಗ್ರಂಥಗಳ ವಿಷಯವಿದ್ದರೂ ಅದು ಅರ್ಥ ವಾಗಬಹುದು, ಆಗದಿರಬಹುದು. ಮೂರೂ ಓದುವುದರಿಂದ ಮೂರರಲ್ಲಿ ಒಂದೇ ಜ್ಞಾನವಿದೆಯೆಂದು ತಿಳಿಯುವುದೇ ಅಲ್ಲದೆ ಅದನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವ ಅವಕಾಶ ಉಂಟಾಗಬಹುದು. ಆದ್ದರಿಂದ ಮೂರು ಗ್ರಂಥಗಳು ಓದಿ ಅನುಸರಿಸಿರೆಂದು ಖುರಾನ್‌ನಲ್ಲಿ 5–68ರಲ್ಲಿ ಹೇಳಿದ್ದಾರೆ.

**ಪ್ರಶ್ನೆ :– ಭಗವದ್ಗೀತೆಯಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ಹೇಳಿದ್ದೀರ. ಒಟ್ಟಾರೆ ಮೂರು ಗ್ರಂಥಗಳು ದೈವಗ್ರಂಥಗಳಾಗಿ ಹೇಳಲ್ಪಟ್ಟಿವೆ. ಒಂದೇ ದೇವರ ಜ್ಞಾನ ಮೂರು ಗ್ರಂಥಗಳಲ್ಲಿ ಅಲ್ಲದೆ ಒಂದೇ ಗ್ರಂಥದಲ್ಲಿದ್ದರೆ ಎಲ್ಲರೂ ಅದನ್ನೇ ಓದುತ್ತಿದ್ದರು. ಹಾಗಲ್ಲದೆ ಮೂರು ಗ್ರಂಥಗಳಾಗಿ ಇರುವುದರಿಂದ ಮನುಷ್ಯರು ಮೂರು ಭಾಗಗಳಾಗಿ, ಮೂರು ಗುಂಪುಗಳಾಗಿ ಸೀಳಿಹೋಗಿ ಒಂದೊಂದು ಗುಂಪು ಒಂದೊಂದು ಗ್ರಂಥವನ್ನು ಓದುತ್ತಾ 'ಇದು ನಮ್ಮ ಗ್ರಂಥ' ಎಂದು ಹೇಳುತ್ತಿದ್ದಾರೆ. ಮೂರು ಗುಂಪಿನವರು ಇದು ನಮ್ಮದು, ಅದು ನಿಮ್ಮದು ಎನ್ನುವುದರಿಂದ 'ನಮ್ಮದು ಶ್ರೇಷ್ಠವಾದುದು ನಿಮ್ಮದು ಕಡಿಮೆ' ಎನ್ನುವ ಅಸೂಯೆ ಅವರಲ್ಲಿ ಬರುವುದು ನಡೆದಿದೆ. ಮನುಷ್ಯರಲ್ಲಿ ಅಸೂಯೆ ಗುಣ ಇರುವುದರಿಂದ ತನ್ನ ಗ್ರಂಥ ಎಂದು ಹೇಳುವುದನ್ನು ಹೊರತು ಎರಡನೆ ಗ್ರಂಥವನ್ನು ಮುಟ್ಟಿಕೊಳ್ಳುವ ಸ್ಥಿತಿಯಲ್ಲಿ ಮನುಷ್ಯ ಇಲ್ಲ. ಹೀಗೆ ಒಂದು ಮತದವರು ಒಂದು ಗ್ರಂಥವನ್ನೇ ಓದುತ್ತಾ ಉಳಿದ ಗ್ರಂಥವನ್ನು ಅನ್ಯಮತ ಗ್ರಂಥವಾಗಿ ಭಾವಿಸಿ ನಾವು ಓದುವುದಿಲ್ಲ ಎಂದು ಹೇಳುತ್ತಿದ್ದಾರೆ. ಮತ ಹಿರಿಯರಾಗಿ ಇರುವವರೇ ಪ್ರಜೆಗಳಲ್ಲಿ ದ್ವೇಷ**

ಭಾವನೆ ಉಂಟುಮಾಡಿ ಇತರ ಗ್ರಂಥಗಳನ್ನು ಓದಬಾರದೆಂದು ಹೇಳುತ್ತಿದ್ದಾರೆ. ಒಂದು ಮತದಲ್ಲಿನ ಮತ ಹಿರಿಯರೇ ಹಾಗೆ ಹೇಳುವುದರಿಂದ ಆ ಮತಸ್ಥರೆಲ್ಲರೂ ಇತರ ಗ್ರಂಥಗಳನ್ನು ಮುಟ್ಟದಂತಿದ್ದಾರೆ. ಇತರ ಎರಡು ಗ್ರಂಥಗಳನ್ನು ಮುಟ್ಟಿಕೊಂಡರು ಕೂಡಾ ತಪ್ಪೇಯೆನ್ನುವ ಭಾವನೆಯಲ್ಲಿ ಇರುವುದರಿಂದ ಕ್ರೈಸ್ತರು ನಮ್ಮ ಬೈಬಲ್‌ನನ್ನು ಹೊರತು ಇತರ ಗ್ರಂಥಗಳು ಓದುವುದಿಲ್ಲ ಎಂದು ಹೇಳುತ್ತಿದ್ದಾರೆ. ದೇವರೇ ಇಳಿದುಬಂದು ಹೇಳಿದರೂ ಕೇಳವ ಸ್ಥಿತಿಯಲ್ಲಿ ಇಲ್ಲ. ಹಾಗಿರುವಾಗ ನೀವು ಮೂರು ಗ್ರಂಥಗಳನ್ನು ಓದು ಎಂದು ಹೇಳುವುದು ಕೆಲವರಿಗೆ ವಿಚಿತ್ರವಾಗಿ ಕಾಣಿಸುತ್ತಿದೆ. ನೀವೇನೊ ಖುರಾನ್ ಗ್ರಂಥದಲ್ಲಿನ ವಾಕ್ಯವನ್ನು ತೆಗೆದು ಹೇಳುತ್ತಿದ್ದೀರ. ಹಿಂದೂಗಳು, ಕ್ರೈಸ್ತರು ಖುರಾನ್ ಗ್ರಂಥವೊಂದರ ಬೆಲೆ ತಿಳಿಯದವರಾಗಿ ಇರುವುದರಿಂದ ಅವರು ಓದುವ ಸ್ಥಿತಿಯಲ್ಲಿ ಇಲ್ಲ. ಇತರ ಮತಗಳನ್ನು ನೋಡಿ ಸಹಿಸಲಾರದವರು, ಅಸೂಯೆಪಡುವವರು, ದ್ವೇಷವನ್ನು ಬೆಳೆಸಿಕೊಂಡವರು ಇತರ ಮತಗಳ ಗ್ರಂಥಗಳನ್ನು ಓದಬಲ್ಲರಾ? ಅದು ನಿಜಕ್ಕು ನಡೆಯದ ಕೆಲಸ. ಈಗಿನ ಮಾನವ ಸಮಾಜ ಎಷ್ಟೋ ಅಜ್ಞಾನದಲ್ಲಿ ಮುಳುಗಿಹೋಗಿರುವಾಗ, ಮೂರನೇಸಲ ಭಗವಂತನು ಬರುತ್ತಾನೆಂದು ಹೇಳಿದರೂ ಅವನನ್ನು ಮನುಷ್ಯರು ಕೇಳುತ್ತಾರಾ?

ದೇವರು ಎರಡುಸಲ ಮನುಷ್ಯನಾಗಿ ಬಂದು ಮೂರು ಗ್ರಂಥಗಳನ್ನು ಕೊಟ್ಟಿರುವುದರಿಂದ ಮೂರನೆ ಸಲ ದೇವರು ಬಂದು ಜ್ಞಾನವನ್ನು ಹೇಳಿದರೆ ಅದನ್ನು ಆಲಕಿಸುತ್ತಾರಾ? ನಾಳೆ ಮೂರನೆಸಲ ಬಂದ ಭಗವಂತನು ತನ್ನ ಜ್ಞಾನವನ್ನು ಗ್ರಂಥರೂಪವಾಗಿ ಕೊಟ್ಟರೆ, ಈಗಲೇ ಇನ್ನೊಂದನ್ನು ನೋಡದವರು ಆಗ ಅದನ್ನು ನೋಡುತ್ತಾರಾ? ಹುಟ್ಟಿದ ಪ್ರತಿ ಮನುಷ್ಯ ಜನ್ಮದಿಂದಲೇ ಯಾವುದೋ ಒಂದು ಮತದವನಾಗಿ ಜನ್ಮಿಸುತ್ತಿದ್ದಾನೆ. ಅವನಿಗೆ ಬುದ್ಧಿ ಬಂದಾಗಲಿಂದ ಅವನು ಹುಟ್ಟಿದ ಮತವನ್ನೇ ಹೊಗಳುವ ಟ್ರಯಿನಿಂಗ್ ಹೊಂದಿರುತ್ತಾರೆ. ಹಾಗಿರುವಾಗ ಮೂರನೆ ಭಗವಂತನ ಮಾತನ್ನು ಯಾರಾದರೂ ಕೇಳುತ್ತಾರೆನ್ನುತ್ತೀರಾ? ಖುರಾನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಏಕೆ ಕರೆಯುತ್ತಿದ್ದೇವೊ ತಿಳಿಯದವರು ಇದರ ನಂತರ

ಪ್ರವಕ್ತ ಬರುವುದಿಲ್ಲ, ಜ್ಞಾನ ಬರುವುದಿಲ್ಲ ಎನ್ನುತ್ತಿದ್ದಾರೆ. ಹಾಗಿರುವಾಗ ಈ ಸಲ ಭಗವಂತನು ಬಂದರೆ ಆತನನ್ನು ಜ್ಞಾನ ತಿಳಿಯದವನಾಗಿ ಕೂಡಾ ನೋಡುತ್ತಾರೊ ಇಲ್ಲವೊ ತಿಳಿದಿಲ್ಲ. ಎರಡನೆ ಜ್ಞಾನ ಹುಟ್ಟುವುದಿಲ್ಲ, ಹುಟ್ಟುವುದೆಲ್ಲ ಅಂತಿಮ ದೈವಗ್ರಂಥದಲ್ಲಿಯೇ ಕೊನೆಯದಾಗಿ ಹುಟ್ಟಿದೆ ಎನ್ನುತ್ತಿರುವಾಗ, ದೇವರು ಬಂದು ಹುಟ್ಟಿದರೂ ಆತನನ್ನು ಪ್ರವಕ್ತನಾಗಿ ಕೂಡಾ ನೋಡುವುದಿಲ್ಲ, ಜ್ಞಾನಿಯಾಗಿ ಕೂಡಾ ನೋಡುವುದಿಲ್ಲ. ಬರುವ ಭಗವಂತನು ಹೇಳಿದ ಜ್ಞಾನ ಗ್ರಂಥರೂಪವಾದರೂ ಅದನ್ನು ಗ್ರಂಥವಾಗಿ ಕೂಡಾ ಲೆಕ್ಕಿಸುವುದಿಲ್ಲ. ಇಂತಹ ಅಜ್ಞಾನ ಸಮಯದಲ್ಲಿ ದೇವರು ಭಗವಂತನಾಗಿ ಬರುತ್ತಾನೆನ್ನುತ್ತೀರಾ?

ಮುಸ್ಲಿಮ್‌ರು ಅಂತಿಮ ದೈವಗ್ರಂಥದಲ್ಲಿಯೇ ಕೊನೆಯದಾಗಿ ಬರುವ ಜ್ಞಾನವೆಲ್ಲವೂ ಬಂದಿದೆಯೆಂದು ಹೇಳುತ್ತಿರುವಾಗ, ಹಿಂದೂಗಳು ಈದಿನ ತಮ್ಮ ಮತ ರಕ್ಷಣೆಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದಾರೆ. ಹಿಂದೂಗಳನ್ನು ಇತರ ಮತಸ್ಥರು ಅವರ ಜ್ಞಾನದಿಂದ ಆಕರ್ಷಿಸುತ್ತಿರುವಾಗ ತಮ್ಮ ಜ್ಞಾನ ಇದೇ ಯೆಂದು ಹೇಳಿಕೊಳ್ಳದವರಾಗಿ ಇತರ ಮತಗಳ ಮೇಲೆ ದಾಳಿಗಳು ಮಾಡುವುದೇ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಹಿಂದೂಗಳ ಜ್ಞಾನ ಹಿಂದೂಗಳಿಗೇ ತಿಳಿಯದೇ ಹೋಗಿರುವು ದರಿಂದ, ಅವರ ಜ್ಞಾನವನ್ನು ಅವರೇ ಗುರುತು ಹಿಡಿಯದವರಾಗಿ ಯಾವುದು ತಮ್ಮ ಜ್ಞಾನವೊ, ಯಾವುದು ಇತರರ ಜ್ಞಾನವೊ ತಿಳಿಯದ ಸ್ಥಿತಿಯಲ್ಲಿದ್ದಾರೆ. ಅನುಮಾನದ ಗಂಡ ಎಲ್ಲರಿಗೂ ಸೋಳೆತನ ಅಂಟಗಟ್ಟಿದಂತೆ, ಅಜ್ಞಾನದ ಹಿಂದೂಗಳು ಜ್ಞಾನ ಹೇಳುವ ಹಿಂದೂಗಳನ್ನೇ ಇತರ ಮತದವರಾಗಿ ಲೆಕ್ಕಿಸಿ ಅವರನ್ನು ಹೊಡೆಯುವುದರಿಂದ, ಹಿಂದೂಗಳು ಹಿಂದೂಗಳನ್ನೇ ಹೊಡೆದು ಕೊಂಡಂತಾಗುತ್ತಿದೆ. 'ಹಿಂದೂ ರಕ್ಷಣೆ' ಎನ್ನುವ ಹೆಸರಿನಿಂದ ಯಾರೋ ಪ್ರೇರೇಪಿಸಿದರೆ ಕುರುಡರಾಗಿ ನಾವು ಏನು ಮಾಡುತ್ತಿದ್ದೇವೆನ್ನುವ ವಿಚಕ್ಷಣೆ ಇಲ್ಲದೇ ತಮ್ಮ ಜ್ಞಾನಿಗಳ ಮೇಲೆ ತಾವೇ ದಾಳಿ ಮಾಡುತ್ತಾ ಜ್ಞಾನವನ್ನು ಹೇಳಬೇಡ ವೆನ್ನುತ್ತಿದ್ದಾರೆ. ಹೇಳುವ ಜ್ಞಾನ ಹಿಂದೂಗಳದೇ ಎಂದು ತಿಳಿಯದೆ, ಜ್ಞಾನ ವಿಷಯವೇ ತಿಳಿಯದವರಾಗಿ ಮೊಂಡಾಗಿ ದಾಳಿಗಳಿಗೆ ಸೀಮಿತವಾಗುತ್ತಿದ್ದಾರೆ.

ಜ್ಞಾನ ಎನ್ನುವುದು ಹಿಂದೂ ಮತರಕ್ಷಕರ ಹತ್ತಿರ ಸ್ವಲ್ಪವೂ ಇಲ್ಲದೇ ಹೋಗಿರುವುದರಿಂದ ಅವರ ಕೈಯ್ಯಲ್ಲಿ ಅವರೇ ಹಿಂದೂ ಜ್ಞಾನವನ್ನು ಕೂಡಾ ತಡೆಹಾಕುತ್ತಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ದೇವರು ಭಗವಂತನಾಗಿ ಬಂದರೆ, ಬಂದು ಜ್ಞಾನವನ್ನು ಹೇಳಿದರೆ ಅದು ಯಾವ ಜ್ಞಾನವೋ ತಿಳಿಯದವರು ಬಂದಿರುವ ಭಗವಂತನನ್ನು ಕೂಡಾ ಬಿಡುವುದಿಲ್ಲ.

ಭಗವಂತನು ಬಂದರೆ ಆಧ್ಯಾತ್ಮಿಕ ಜ್ಞಾನವನ್ನು ಬೋಧಿಸುತ್ತಾನೆ. ಅದರಲ್ಲಿ ಆತ್ಮಜ್ಞಾನ ಹೊರತು ದೇವತೆಗಳ ಜ್ಞಾನ ಇರುವುದಿಲ್ಲ. ಯಾವಾಗಾದರೆ ದೇವತೆಗಳ ಜ್ಞಾನವಾಗಲಿ, ದೇವತೆಗಳ ಪೂಜೆಯಾಗಲಿ ಇಲ್ಲದಂತಿರುತ್ತದೊ ಆಗ ಅವರು ಇತರ ಮತಗಳಾಗಿ ಲೆಕ್ಕಿಸುವ ಹಿಂದೂಗಳು ದೇವರು ಹೇಳುವ ಆಧ್ಯಾತ್ಮಿಕ ಜ್ಞಾನವನ್ನು ಕೇಳುತ್ತಾರಾ? ಆತನನ್ನು ಆತಂಕಪಡಿಸುತ್ತಾರಾ? ದ್ವಾಪರಯುಗದ ಕೊನೆಯಲ್ಲಿ ಬಂದಿರುವ ಭಗವಂತನು ಕೃಷ್ಣನೆಂದು ವ್ಯಾಸನು ಬರೆದ ಭಗವದ್ಗೀತೆಯಿಂದ ಇಂದು ತಿಳಿದಿದೆ. ಆ ದಿನ ಕೃಷ್ಣನನ್ನು ಕುರಿತು ಯಾರಿಗೂ ತಿಳಿದಿಲ್ಲ. ಈದಿನ ಹಿಂದೂಮತ ರಕ್ಷಕರು ಕೃಷ್ಣನನ್ನು ನಿಂದಿಸುವುದು ನೋಡಿದ್ದೇನೆ. ಏಕೆಂದರೆ ಕೃಷ್ಣನು ತನ್ನ ಭಗವದ್ಗೀತೆಯಲ್ಲಿ ರಾಮನು ದೇವರೆಂದು ಬರೆಯಲಿಲ್ಲವಂತೆ. ಇನ್ನೂ ಏನೆಂದಿದ್ದಾರೆಂದರೆ "ಏನೋ ದೊಡ್ಡ ಜ್ಞಾನ ಹೇಳಿದ್ದಾನೆಂದು ಭಗವದ್ಗೀತೆಯನ್ನು ಕೆಲವರು ಮಹೋನ್ನತವಾಗಿ ಹೇಳುತ್ತಿದ್ದಾರೆ. ಅದರಲ್ಲಿ ಯಾವ ಶ್ರೇಷ್ಠತ್ವ ಇದೆಯೆಂದು, ಕೆಲವರು ಹಿಂದೂ ಮತ ರಕ್ಷಕರು ಎನ್ನುವುದು ನಾನೇ ಸ್ವತಃವಾಗಿ ಕೇಳಿದ್ದೇನೆ. ಭಗವದ್ಗೀತೆಯಲ್ಲಿ ಹಿಂದೂ ಸಂಸ್ಕೃತಿ ಪ್ರಕಾರ ಪೂಜೆಗಳು ಮಾಡೆಂದು ಹೇಳಿದ್ದಾನಾ? ರಾಮನನ್ನು ಆರಾಧಿಸಿರೆಂದು ಹೇಳಿದ್ದಾನಾ? ರಾಮನನ್ನೇ ಅಲ್ಲ ಯಾರನ್ನು ಕುರಿತು ಹೇಳದಂತೆ ನನ್ನನ್ನೇ ಪೂಜಿಸು ಎಂದು ಹೇಳಿದ್ದಾನೆ. ತನ್ನ ಸ್ವಂತ ಡಬ್ಬಾ ಹೊಡೆದುಕೊಂಡು ಎಲ್ಲರನ್ನು ತನ್ನ ಭಕ್ತರನ್ನು ಮಾಡಿ ಕೊಳ್ಳಬೇಕೆಂದುಕೊಂಡಿದ್ದಾನೆ. ಅಷ್ಟೇ ಹೊರತು ಪ್ರಜೆಗಳಿಗೆ ಭಕ್ತಿಮಾರ್ಗವನ್ನು ಬೋಧಿಸಿದ್ದಾನಾ? ಕೆಲವರು ಬುದ್ಧಿ ಕಡಿಮೆ ಇರುವವರು ಕುರುಡರಂತೆ ಭಗವದ್ಗೀತೆಯನ್ನು ಹಿಂದೂಗಳ ಗ್ರಂಥವೆಂದು ಹೇಳುತ್ತಿದ್ದಾರೆ. ಅದರಲ್ಲಿ ಹಿಂದೂಗಳ ಬಗ್ಗೆ ಹೇಳಿರುವುದು ಏನಾದರೂ ಇದೆಯಾ?

ನಾವು ಎಂದಿಗೂ ಕೂಡಾ ಕೃಷ್ಣನನ್ನಾಗಲಿ, ಆತನು ಬರೆದ ಭಗವದ್ಗೀತೆಯನ್ನಾಗಲಿ ಒಪ್ಪಿಕೊಳ್ಳುವುದಿಲ್ಲ. ಹಿಂದೂ ಸಂಸ್ಕೃತಿಯನ್ನು ಕುರಿತು, ಅಯೋಧ್ಯ ರಾಮನನ್ನು ಕುರಿತು ಬೋಧಿಸದವರನ್ನು ಎಂದಿಗೂ ಒಪ್ಪಿಕೊಳ್ಳುವುದಿಲ್ಲ" ಎಂದು ಹೇಳುತ್ತಿದ್ದಾರೆ.

ಭಗವದ್ಗೀತೆಯನ್ನು ಹೇಳಿ ಐದುಸಾವಿರ ವರ್ಷಗಳಾದರೂ ಅದರ ಶ್ರೇಷ್ಠತ್ವ ತಿಳಿಯದೆ ನಾವು ಹಿಂದೂಗಳು ಎಂದು ಮುಖದ ಮೇಲೆ ಬೊಟ್ಟು ಇಟ್ಟುಕೊಂಡವರೆ ಹೀಗೆ ಮಾತನಾಡುತ್ತಿದ್ದರೆ ಸಾಧಾರಣ ಪ್ರಜಾನೀಕ ಭಗವದ್ಗೀತೆ ಎಂದರೆ ಏನೋ ತಿಳಿಯದ ಸ್ಥಿತಿಯಲ್ಲಿದ್ದಾರೆ. ಆದ್ದರಿಂದ ಉಳಿದ ಎರಡು ಮತದವರೊಂದಿಗೆ ಹಿಂದೂಗಳನ್ನು ಹೋಲಿಸಿದರೆ ಆಯಾ ಮತದವರು ಕೆಲವರು ಗ್ರಂಥವನ್ನು ಓದಿದರೂ, ಉಳಿದವರು ಗ್ರಂಥವನ್ನು ಗೌರವಿಸುತ್ತಿದ್ದಾರೆ. ಇದು ನಮ್ಮ ಗ್ರಂಥ ಎಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ಹಿಂದೂಗಳ ವಿಷಯಕ್ಕೆ ಬಂದರೇ ವೇದಗಳೇ ನಮ್ಮ ಗ್ರಂಥಗಳೆಂದು ಹೇಳುತ್ತಿದ್ದಾರೆ. ಭಗವದ್ಗೀತೆ ನಮ್ಮ ಗ್ರಂಥ ಅಲ್ಲವಾ! ಎಂದು ಕೇಳಿದರೆ ಅದಕ್ಕೆ ಅವರು ಹೇಳಿದ ಉತ್ತರ ಹೀಗೆ ಇದೆ. "ಭಗವದ್ಗೀತೆ ಹಿಂದೂ ಗ್ರಂಥವೇ ಎನ್ನಬಹುದು ಆದರೆ, ಅದು ನಿನ್ನೆ ಮೊನ್ನೆ ತಯಾರಾಗಿರುವುದು. ಪೂರ್ವ ಕೃತಯುಗದಿಂದ ಸನಾತನ ಧರ್ಮಗಳನ್ನು ಬೋಧಿಸುತ್ತಿರುವವು ವೇದಗಳು. ಹಿಂದೂಗಳು ಎಂದರೆ ವೇದಗಳು ಎಂದು ಹೇಳಬೇಕಾಗಲಿ ಭಗವದ್ಗೀತೆಯೆಂದು ಹೇಳಬಾರದು" ಎಂದು ಹೇಳುತ್ತಿದ್ದಾರೆ. ಹಿಂದೂ ಧರ್ಮಗಳನ್ನು ಉದ್ಧರಿಸುತ್ತಿದ್ದೇವೆ ಯೆಂದು, ನಮಗಿಂತ ತಿಳಿದವರು ಇಲ್ಲವೆಂದು, ಹಿಂದೂ ಮತಕ್ಕೆ ರಕ್ಷಕರಾಗಿ ಹೇಳಿಕೊಳ್ಳುವವರು ಹೇಳುತ್ತಿದ್ದಾರೆ. ಅದೇ ಹಿಂದೂ ಮತ ರಕ್ಷಕರಲ್ಲಿಯೇ ಒಂದು ಗುಂಪು ರಾಮನು ದೇವರೆಂದು ಬೋಧಿಸುತ್ತಿರುವಾಗ, ಮತ್ತೊಂದು ಗುಂಪು ಭಜರಂಗಬಲಿ ಆದ ಹನುಮಂತನೇ ದೇವರೆಂದು ಹೇಳುತ್ತಿದ್ದಾರೆ? ಶಿವಸೇನಯೆನ್ನುವ ಗುಂಪಿನವರು ಶಿವನೇ ದೊಡ್ಡವನೆಂದು "ಓಂ ನಮಃ ಶಿವಾಯ" ಎಂದು ಹೇಳುತ್ತಿದ್ದಾರೆ. ಮತ್ತೊಬ್ಬ ಹಿಂದೂ ರಕ್ಷಕರು 'ಜೈ ಶ್ರೀರಾಮ್' ಎನ್ನುತ್ತಿದ್ದಾರೆ. ಮತ್ತೊಂದು ಗುಂಪಿನವರು 'ಜೈ ಭಜರಂಗಬಲಿ' ಎನ್ನುತ್ತಿದ್ದಾರೆ. ಒಂದುವೇಳೆ ಆ ಸಮಯಕ್ಕೆ ನಾವು ಅಲ್ಲಿದ್ದರೂ ಅವರು ಏನು ಹೇಳಿದರೆ ಅದೇ ಜೈ ಅನ್ನಬೇಕು.

ಇಲ್ಲದಿದ್ದರೆ ನಮಗಿರುವ ಮರ್ಯಾದೆ ಕೂಡಾ ಹೋಗುತ್ತದೆ. ಈದಿನ ಹಿಂದೂಗಳು ಅವರ ದೇವರು ಯಾರೋ ಅವರಿಗೆ ತಿಳಿಯದೆ, ಅವರ ಗ್ರಂಥ ಯಾವುದೋ ಅವರಿಗೆ ತಿಳಿಯದೆ, ಅವರ ಜ್ಞಾನವೇನೊ ಅವರಿಗೆ ತಿಳಿಯದಂತಿದ್ದಾರೆ. ಇಂತಹ ಕ್ಲಿಷ್ಟಪರಿಸ್ಥಿತಿಯನ್ನು ನೋಡಿದರೆ "ದೇವರ ಆಗಮನಕ್ಕೆ ಇದು ಸಮಯವಲ್ಲವೇ?" ಎಂದೆನಿಸುತ್ತದೆ.

ದೇವರು ಬಂದರೂ ಆತನು ದೇವರಾಗಿ ಬರುವುದಿಲ್ಲ. ಸಾಧಾರಣ ಮನುಷ್ಯನಾಗಿ ಬರುತ್ತಾನೆ. ಆತನನ್ನು ಯಾರೂ ಗುರುತಿಸುವುದಕ್ಕೆ ಸಾಧ್ಯವಿರುವುದಿಲ್ಲ. ಆದರೂ ಆತನು ದೈವಜ್ಞಾನವಾದ ತನ್ನ ಜ್ಞಾನವನ್ನು ಹೇಳಲು ಬರುತ್ತಾನೇ ಹೊರತು, ತಾನೆ ಸ್ವತಃವಾಗಿ ಸೃಷ್ಟಿಸಿದ ದೇವತೆಗಳನ್ನು ಕುರಿತು ಹೇಳುವುದಕ್ಕೆ ಬರುವುದಿಲ್ಲ. ದೇವತಾ ಪೂಜೆಯನ್ನು ಕುರಿತು ಹೇಳಿದರೇನೆ ಅವನು ಹಿಂದೂವು ಎಂದು, ಮೊಂಡು ಗುರುತಾಗಿರುವ ಹಿಂದೂಗಳು ಆತ್ಮಜ್ಞಾನವನ್ನು ಹೇಳಿದರೆ, ಅವರಿಗೆ ಆತ್ಮಜ್ಞಾನವನ್ನು ಕುರಿತು ತಿಳಿದಯದಿರುವುದರಿಂದ, ಅಷ್ಟೇಯಲ್ಲದೆ ಅವರಿಗೆ ಗ್ರಹಿಸುವಶಕ್ತಿ ಇಲ್ಲದಿರುವುದರಿಂದ ಹೇಳುವುದು ಹಿಂದೂ ಧರ್ಮಗಳ ಜ್ಞಾನವೇ ಯೆಂದು ತಿಳಿಯದೆ, ಹೇಳುವವನ ಮೇಲೆ ದಾಳಿಮಾಡಿ ಓಡಿಸುತ್ತಾರೆ. ಅಂತಹ ಪರಿಸ್ಥಿತಿ ಇದೆಯೆಂದು ಹೇಳುವುದಕ್ಕೆ ನಾವೇ ನಿದರ್ಶನ. ನಾವು ಸ್ವಚ್ಛವಾದ ಭಗವದ್ಗೀತಾ ಜ್ಞಾನವನ್ನು ಎಲ್ಲಿ ಹೇಳಿದರೂ ಅಲ್ಲಿ ನಮ್ಮನ್ನು ಹಿಂದೂಗಳು, ಅಲ್ಲವೆಂದು, ನಾವು ಹೇಳುವ ಜ್ಞಾನ ಹಿಂದೂಗಳ ಜ್ಞಾನ ಅಲ್ಲವೆನ್ನುವುದು ನಡೆದಿದೆ. ನಾವು ದೈವಜ್ಞಾನವನ್ನು ಪ್ರಚಾರ ಮಾಡುವುದಕ್ಕೆ ಒಂದು ದೊಡ್ಡ ಸಂಸ್ಥೆಯನ್ನು ಸ್ಥಾಪಿಸಿ, ಆ ಸಂಸ್ಥೆಯಲ್ಲಿ ಕೆಲಸ ಮಾಡುವ ಸದಸ್ಯರೆಲ್ಲರೂ ದೇವರ ಜ್ಞಾನವಾದ ಭಗವದ್ಗೀತೆಯನ್ನು ಪ್ರಚಾರ ಮಾಡುವಂತೆ ಪ್ರೋತ್ಸಾಹಿಸಿದ್ದೇವೆ. ಕೆಲವುಕಡೆ ನಮ್ಮ ಪ್ರಚಾರಕ್ಕೆ ಎಷ್ಟೋ ಒಳ್ಳೆಯಹೆಸರು ಬಂದರೆ, ಎಲ್ಲಿಯಾದರೆ ಹಿಂದೂ ಮತ ರಕ್ಷಕರಿದ್ದಾರೋ ಅಲ್ಲೆಲ್ಲ ನಮ್ಮ ಜ್ಞಾನ ಪ್ರಚಾರಕ್ಕೆ ವಿರೋಧ ಏರ್ಪಟ್ಟಿದೆ. ನಮ್ಮ ಜ್ಞಾನ ಪ್ರಚಾರವನ್ನು ಅಲ್ಲಿಗೆ ನಿಲ್ಲಿಸಿ ಊರು ಬಿಟ್ಟು ಹೋಗಿರೆಂದು ಹೇಳಿದ ಸಂಘಟನೆಗಳು ಎಷ್ಟೋ ಇವೆ. ಭೌತಿಕವಾಗಿ ದಾಳಿ ಮಾಡಿ ನೀವು ಹಿಂದೂಗಳ ಮುಸುಗಿನಲ್ಲಿರುವ ಕ್ರೈಸ್ತರೆಂದು ದೂಷಿಸಿದ ಸಮಯಗಳು ಇವೆ.

ನಾವು ಹಿಂದೂ ಮತದಲ್ಲಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳಿರುವಂತೆ ತ್ರೈತ ಸಿದ್ಧಾಂತವನ್ನು ಶಾಸ್ತ್ರಬದ್ಧವಾಗಿ ಪ್ರತಿಪಾದಿಸಿ, ತ್ರೈತ ಸಿದ್ಧಾಂತದ ಪ್ರಕಾರ ಭಗವದ್ಗೀತೆಯನ್ನು ಬರೆದು ಪ್ರಚಾರ ಮಾಡಿದರೆ ನಮ್ಮನ್ನು ಕ್ರೈಸ್ತರೆಂದು ಕರೆದಿದ್ದಾರೆ. 'ತ್ರೈತ' ಎಂದು ಹೆಸರು ಕೇಳಿದ ತಕ್ಷಣ ನಮ್ಮನ್ನು ಕ್ರೈಸ್ತರಾಗಿ ಲೆಕ್ಕಿಸುತ್ತಿದ್ದಾರೆ. ಅದಕ್ಕೆ ಕಾರಣ ಕ್ರೈಸ್ತಮತದಲ್ಲಿ ತ್ರಿತ್ವ ಎನ್ನುವ ಮಾತು ಇದೆ. ಅವರು ತ್ರಿತ್ವವನ್ನು ಕುರಿತು ಹೇಳುತ್ತಿದ್ದಾರೆ. ಆದ್ದರಿಂದ ನಾವು ಹೇಳುವ ಜ್ಞಾನವನ್ನು ಅರ್ಥ ಮಾಡಿಕೊಳ್ಳದವರು ನಮ್ಮನ್ನು ಕೂಡಾ ಕ್ರೈಸ್ತರಾಗಿ ಹೇಳುವುದಲ್ಲದೆ ಭಗವದ್ಗೀತೆಯನ್ನು ಕೂಡಾ ಹಿಂದೂ ಮುಸುಗು ತೊಟ್ಟಿರುವ ಬೈಬಲ್ ಎನ್ನುತ್ತಿದ್ದಾರೆ. ಸುಮಾರು ನೂರು ಕಮಿಟೀಗಳು ಹೊಂದಿ ಸುಮಾರು ಹತ್ತುಸಾವಿರ ಜನ ಜ್ಞಾನ ಪ್ರಚಾರ ಮಾಡುವ ಸದಸ್ಯರಿರುವ ನಾವು ಎಷ್ಟೋ ಅಡೆತಡೆಗಳನ್ನು ಎದುರಿಸಿ ಜ್ಞಾನ ಪ್ರಚಾರ ಮಾಡುತ್ತಿದ್ದೇವೆ. ನಾನು ಯಾರೋ ಯಾರಿಗೂ ತಿಳಿದಿಲ್ಲ. ನನ್ನನ್ನು ನನ್ನ ಭಕ್ತರು ಹೊರತು ಉಳಿದವರು ಯಾರು ನನ್ನ ಹತ್ತಿರಕ್ಕೆ ಬರುವ ಅವಕಾಶವು ಕೂಡಾ ಇಲ್ಲ.

ನಾವು ಹಿಂದೂಗಳಾಗಿದ್ದು ಹಿಂದೂಗಳ ಮಧ್ಯೆ ಹಿಂದೂ ಜ್ಞಾನವನ್ನು ಪ್ರಚಾರ ಮಾಡುವುದಕ್ಕೆ ಎಷ್ಟೋ ತೊಂದರೆಗಳು ಎದುರಿಸುತ್ತಿದ್ದೇವೆ. ಈದಿನ ಪರಮತಗಳು ಇವೆ, ಆದ್ದರಿಂದ ನಮ್ಮ ಜ್ಞಾನವನ್ನು ಪರಮತದವರು ವಿರೋಧಿಸಿದರೂ ಅದಕ್ಕೆ ಒಂದು ಅರ್ಥವಿರುತ್ತಿದೆ. ಹಿಂದೂಗಳು ವಿರೋಧಿಸಿದರೆ ಅದಕ್ಕೆ ಅರ್ಥವೇ ಇಲ್ಲ. ಪರಮತಗಳ ಮೇಲೆ ಅಸೂಯೆ ದ್ವೇಷಗಳಿಂದಿರುವ ಹಿಂದೂಗಳು ಕುರುಡರಾಗಿ, ಜ್ಞಾನವನ್ನು ಗುರುತಿಸದವರಾಗಿ ಈದಿನ ನಮ್ಮನ್ನು ವಿರೋಧಿಸುತ್ತಿದ್ದಾರೆ. ಆದರೆ ಕೃಷ್ಣನು ಬಂದಿರುವ ದ್ವಾಪರಯುಗದ ಕೊನೆಗೆ ಹೋದರೆ ಆದಿನ ಇತರ ಮತಗಳ ಪ್ರಸ್ತಪವೇ ಇಲ್ಲ. ಏನಿದ್ದರೂ ಒಂದು ಹಿಂದೂತ್ವ ಹೊರತು ಇತರೆ ಯಾವುವು ಇಲ್ಲ. ಅಂತಹ ಸಮಯದಲ್ಲಿ ಕೂಡಾ ಕೃಷ್ಣನು ತಾನು ಭಗವದ್ಗೀತೆ ಜ್ಞಾನ ಹೇಳಿದಂತೆ ಯಾರಿಗೂ ತಿಳಿಯದಂತೆ ಮಾಡಿದ್ದಾನೆ. ತಾನು ಧರ್ಮಗಳನ್ನು ತಿಳಿಸುವುದಕ್ಕೆ ಭೂಮಿಮೇಲಕ್ಕೆ ಬಂದರೂ, ಆ ವಿಷಯ ಯಾರಿಗೂ ತಿಳಿಯದಂತೆ

ಜಾಗ್ರತೆವಹಿಸಿದ್ದಾನೆ. ಅಷ್ಟೇ ಅಲ್ಲದೆ ಆತನು ಪ್ರತ್ಯಕ್ಷವಾಗಿ ಹತ್ತುಜನರಿಗೆ ಎಲ್ಲಿಯೂ ಜ್ಞಾನವನ್ನು ಹೇಳಲಿಲ್ಲ. ಭಗವದ್ಗೀತೆ ಒಂದನ್ನು ಹೇಳಿದರೂ ಅದು ಯಾರಿಗೂ ತಿಳಿಯದಂತೆ, ಯಾರೂ ಕೇಳದ ಜಾಗದಲ್ಲಿ ಅರ್ಜುನನೊಬ್ಬನಿಗೆ ತಿಳಿಸಿದ್ದಾನೆ. ಕೃಷ್ಣನು ಹಾಗೆ ಹೇಳಿರುವುದು ಕೂಡಾ ವ್ಯಾಸನು ಭಗವದ್ಗೀತೆಯನ್ನು ಬರೆದು ಹೊರಗೆ ಪ್ರಪಂಚದೊಳಗೆ ಕಳಿಸುವುದರಿಂದ ತಿಳಿದಿದೆ. ಕೃಷ್ಣನು ಭಗವದ್ಗೀತೆಯನ್ನು ಹೇಳಿದ್ದಾನೆಂದು ಹೊರಗೆ ಪ್ರಪಂಚಕ್ಕೆ ತಿಳಿಯುವಷ್ಟರಲ್ಲಿ ಸಾವಿರಾರು ವರ್ಷಗಳು ಕಳೆದುಹೋಗಿವೆ. ಈದಿನ ಭಗವದ್ಗೀತೆಯನ್ನು ವಿಮರ್ಶಿಸಿದರೂ ಅಥವಾ ಸಮರ್ಥಿಸಿದರೂ ಅದು ನೇರವಾಗಿ ಕೃಷ್ಣನಿಗೆ ತಿಳಿಯುವ ಅವಕಾಶವಿಲ್ಲ. ಏನಿದ್ದರೂ ಸರಿಹೋಗದವರು ಆತನನ್ನು ಮರೆಯಿಂದ ಬೈಯಬೇಕಾಗಿದ್ದೇ ಹೊರತು, ಪ್ರತ್ಯಕ್ಷವಾಗಿ ಬೈಯುವ ಅವಕಾಶವಿಲ್ಲ. ಜ್ಞಾನ ಹೇಳುವುದರಿಂದ ಮಾನವ ಸಮಾಜದಲ್ಲಿ ಎಷ್ಟೋ ಸಿಕ್ಕುಗಳು ಬರುತ್ತವೆಂದು ತಿಳಿದ ಕೃಷ್ಣನು, ಅರ್ಜುನನಿಗೊಬ್ಬನಿಗೆ ಮರೆಯಲ್ಲಿ ಹೇಳಿ ಹೋಗಿದ್ದಾನೆ.

ಇಂದು ನಾವು ಪ್ರತ್ಯಕ್ಷವಾಗಿ ಜ್ಞಾನವನ್ನು ಹೇಳಿರುವುದರಿಂದ ಅನೇಕ ಅಡೆತಡೆಗಳು ನಮಗೆ ತಪ್ಪದೆ ಇರುತ್ತವೆ. ಆದರೂ ಎಲ್ಲವನ್ನು ಎದುರಿಸಿಕೊಂಡು ಭೂಮಿಮೇಲೆ ಎದುರಾಡದ ಜ್ಞಾನವನ್ನು ಬೋಧಿಸುತ್ತಿದ್ದೇವೆ. ಇತರ ಮತಗಳು ಇಲ್ಲದ ಸಮಯದಲ್ಲಿಯೇ ಏತಕ್ಕಾದರೂ ಒಳ್ಳೆಯದೆಂದು ಆತನು ಪ್ರತ್ಯಕ್ಷವಾಗಿ ಯಾರಿಗೂ ಜ್ಞಾನವನ್ನು ಹೇಳಲಿಲ್ಲ. ಹೇಳಿರುವುದು ಒಬ್ಬನಿಗೇ, ಆದರೂ ಆ ಒಬ್ಬನು ತನಗೆ ಹತ್ತಿರ ಸಂಬಂಧಿಕನು ಆಗಿರುವುದರಿಂದ ಆತನಿಂದ ಯಾವ ತೊಂದರೆ ಇರುವುದಿಲ್ಲ ಎನ್ನುವ ನಂಬಿಕೆಯಿಂದ ಹೇಳಿದ್ದಾನೆ. ಆಗಲೇ ಕೃಷ್ಣನು ಮಾನವ ಸಮಾಜವೊಂದರ ಅಜ್ಞಾನವನ್ನು ಗುರುತಿಸಿ ಅದಕ್ಕೆ ತಕ್ಕಂತೆ, ತಾನು ಜ್ಞಾನವನ್ನು ಹೇಳಿದಂತೆ ಕೂಡಾ ಯಾರಿಗೂ ತಿಳಿಯದಂತೆ ಹೇಳಿಹೋಗಿದ್ದಾನೆ. ಇತರ ಮತಗಳು ಇಲ್ಲದ ಆ ಕಾಲದಲ್ಲಿಯೇ ಎಷ್ಟೋ ಜಾಗ್ರತೆಗಳು ತೆಗೆದುಕೊಂಡು ಕೃಷ್ಣನು ತನ್ನ ಬರುವಿಕೆಗೆ ತಕ್ಕ ನ್ಯಾಯವನ್ನು ಮಾಡಿ ಜ್ಞಾನವನ್ನು ಹೇಳಿಹೋಗಿದ್ದಾನೆ. ಈಗ ದೇವರ ಬರುವಿಕೆಗೆ ಇದು ಸಮಯವೇ ಆದರೂ ದ್ವಾಪರಯುಗದಲ್ಲಿಯೇ

**ಕಳ್ಳನಾಗೆ ಯಾರಿಗೂ ತಿಳಿಯದಂತೆ ಹೇಳಿಹೋಗಿದ್ದಾನೆ. ಈಗ ಪೂರ್ತಿ ಅಜ್ಞಾನದ ಸಮಯ, ಇತರ ಮತಗಳಿರುವ ಸಮಯದಲ್ಲಿ ಜ್ಞಾನವನ್ನು ಭೂಮಿಮೇಲೆ ಹೇಗೆ ಹೇಳುತ್ತಾನೆ? ಎನ್ನುವುದೇ ದೊಡ್ಡ ಪ್ರಶ್ನೆಯಾಗಿದೆ. ಒಂದುವೇಳೆ ನಾವು ಬದುಕಿರುವಾಗ ಆತನು ಈಗಲೇ ಬಂದರೇ ಹೇಗೆ ಜ್ಞಾನವನ್ನು ಹೇಳಿ ಅಧರ್ಮ ಗಳನ್ನು ಇಲ್ಲದೇ ಮಾಡಬಲ್ಲನೋ, ಹೇಗೆ ಧರ್ಮಗಳನ್ನು ತಿಳಿಸುತ್ತಾನೋ ನೋಡಬೇಕೆಂದಿದೆ. ಆದರೂ ಬಂದಿರುವಾತನು ಯಾರು? ಎನ್ನುವ ವಿಷಯ ತಿಳಿದಿಲ್ಲ, ಆದ್ದರಿಂದ ಆ ಕೋರಿಕೆ ನಮಗೆ ನೆರವೇರುವುದಿಲ್ಲವೆಂದು ತಿಳಿದುಹೋಗಿದೆ.**

**ನಿಮಗೆ ಭೂಮಿಮೇಲೆ ಎಷ್ಟೋ ಜ್ಞಾನವನ್ನು ತಿಳಿಸಿದ ಅನುಭವವಿದೆ. ಈದಿನವಾಗಲಿ, ನಾಳೆಯಾಗಲಿ ದೇವರು ಮನುಷ್ಯನಾಗಿ ಇಳಿದುಬಂದು ಭಗವಂತನಾಗಿ ಜ್ಞಾನವನ್ನು ತಿಳಿಸಿದರೇ, ಹೇಗೆ ಹೇಳುತ್ತಾನೋ? ಏನು ಮಾಡುತ್ತಾನೋ ಎನ್ನುವ ನಮ್ಮ ಪ್ರಶ್ನೆಗೆ ನೀವೇ ಉತ್ತರ ಹೇಳಬೇಕು. ಆದುದರಿಂದ ನಿಮ್ಮನ್ನೇ ಕೇಳುತ್ತಿದ್ದೇವೆ, ಉತ್ತರ ಹೇಳಿರಿ. ನಿಮ್ಮ ಉತ್ತರ ನಮಗೆ ಸುಲಭವಾಗಿ ಅರ್ಥವಾಗುವಂತೆ ಇರಬೇಕು. ದ್ವಾಪರಯುಗದಲ್ಲಿಯೇ, ಇಷ್ಟು ಅಜ್ಞಾನ ಇಲ್ಲದ ಸಮಯದಲ್ಲಿ ಕೃಷ್ಣನು ಜ್ಞಾನವನ್ನು ಹೇಳುವುದಕ್ಕೆ ಭಯಪಟ್ಟಂತೆ ಮರೆಯಲ್ಲಿ ಒಬ್ಬನಿಗೇ, ಅದು ತನ್ನಮಾತು ಕೇಳುವ ಅರ್ಜುನನಿಗೆ ಮಾತ್ರ ಹೇಳಿದ್ದಾನೆ, ಈ ಕಾಲದಲ್ಲಿ ಬರುವ ಭಗವಂತನು ಭಯಪಡದಂತೆ ಜ್ಞಾನವನ್ನು ಹೇಳುತ್ತಾನಾ? ಪ್ರತ್ಯಕ್ಷವಾಗಿ ಧರ್ಮಗಳನ್ನು ಬೋಧಿಸುತ್ತಾನಾ?**

**ಉತ್ತರ :–** ನನ್ನ ಉತ್ತರಕ್ಕಿಂತ ನಿನ್ನ ಪ್ರಶ್ನೆ ಬಹಳ ದೊಡ್ಡದಾಗಿ ಕಾಣಿಸುತ್ತಿದೆ. ಬಹುಶಃ ಪ್ರಪಂಚದಲ್ಲಿ ಇಷ್ಟುದೊಡ್ಡ ಪ್ರಶ್ನೆ ಎಲ್ಲಿಯೂ ಇರುವುದಿಲ್ಲ ಎಂದುಕೊಳ್ಳುತ್ತೇನೆ. ದ್ವಾಪರಯುಗದಲ್ಲಿ ಬಂದಿರುವ ಕೃಷ್ಣನು ಯಾರಿಗೂ ಭಯಪಡಲಿಲ್ಲ. ನೋಡುವವರಿಗೆ ಆತನು ಭಯಪಟ್ಟು ಹೊರಗೆ ತಿಳಿಯುವಂತೆ ತನ್ನ ಬೋಧನೆಯನ್ನು ಹೇಳಲಿಲ್ಲವೆನ್ನುವಹಾಗೆಯೇ ಇದ್ದರೂ ನಾವು ಅಂದುಕೊಂಡಹಾಗೆ ಆತನು ಯಾರಿಗೂ ಭಯಪಡಲಿಲ್ಲ. ಕೃಷ್ಣನು ತನ್ನ

ಜ್ಞಾನದಿಂದ, ಅಧರ್ಮಗಳನ್ನು ಬೋಧಿಸಿದರು, ಅಧರ್ಮಗಳಿಗೆ ತವರುಮನೆಯಾದ ವ್ಯಾಸನನ್ನು ಮಾರ್ಪಡಿಸಬೇಕೆಂದು ಯೋಜನೆಯನ್ನು ರಚಿಸಿಕೊಂಡಿದ್ದಾನೆ. ಆ ಯೋಜನೆಯ ಪ್ರಕಾರ ನಡೆದುಕೊಂಡಿದ್ದಾನೆ. ತಾನು ಹೇಳುವ ಜ್ಞಾನ ಇತರರಿಗೆ ತಿಳಿದರೆ ವ್ಯಾಸನು ಇತರರಿಗೆ ತಿಳಿದ ಜ್ಞಾನದಿಂದ ಬದಲಾಗುವುದಿಲ್ಲ, ಆಗ ವ್ಯಾಸನಲ್ಲಿ ಅಹಮ್ ಕೆಲಸ ಮಾಡುತ್ತದೆ. ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು ಬೋಧಿಸಿದ ವ್ಯಾಸನನ್ನು ಬದಲಾಯಿಸುವುದಕ್ಕೇ ಕೃಷ್ಣನು ದ್ವಾಪರಯುಗದಲ್ಲಿ ಒಂದು ಪದ್ಧತಿಯನ್ನು ಅನುಸರಿಸಿ ಜ್ಞಾನವನ್ನು ಹೇಳಿದ್ದಾನೆ. ಅಷ್ಟೇ ಹೊರತು ಇತರರಿಗೆ ಭಯಪಟ್ಟಿದ್ದಾನೆಂದು ಹೇಳಬಾರದು. ಇನ್ಮುಂದೆ ಬರುವ ಭಗವಂತನು ಮೊದಲೆ ತನ್ನ ಜ್ಞಾನವನ್ನು ಬೋಧಿಸುವ ವಿಧಾನವನ್ನು ಎಲ್ಲವನ್ನು ನಿರ್ಣಯಿಸಿಕೊಂಡು ಬರುತ್ತಾನೆ. ಆತನ ನಿರ್ಣಯದ ಪ್ರಕಾರವೇ ನಡೆಯುತ್ತದೆ. ಅಷ್ಟೇ ಹೊರತು ಆತನು ಭಯಪಡುವವನಲ್ಲ.

ಈ ಸಲ ದೇವರು ಮನುಷ್ಯನಾಗಿ ಭಗವಂತನಾಗಿ ಬಂದರೆ, ಗತ ಎರಡು ಜೀವನಗಳಿಗಿಂತ ಈಸಲ ತನ್ನ ಜೀವನದಲ್ಲಿ ಸ್ವಲ್ಪ ಬದಲಾವಣೆಯಿಂದ ಇರುತ್ತದೆ. ದ್ವಾಪರಯುಗದಲ್ಲಿ ಬಂದಿರುವ ಕೃಷ್ಣನು ಧನಿಕನಾಗಿ ಇದ್ದನು. ಕಲಿಯುಗದಲ್ಲಿ ಬಂದಿರುವ ಯೇಸು ಬಹಳ ಬಡವನಾಗಿ ಇದ್ದನು. ಈ ಸಲ ಆತನನ್ನು ಯಾರೂ ಗುರುತಿಸದಂತೆ ಆ ಎರಡು ಜನ್ಮಗಳಿಗು ವಿಭಿನ್ನವಾಗಿ ಇರುತ್ತದೆಂದು ಅಂದುಕೊಳ್ಳುತ್ತಿದ್ದೇವೆ. ಈಸಲ ಸ್ವಲ್ಪ ಕಾಲ ಬಡವನಾಗಿ, ಸ್ವಲ್ಪ ಕಾಲ ಧನಿಕನಾಗಿ ಬರುತ್ತಾನೆಂದು ಅಂದುಕೊಳ್ಳುತ್ತಿದ್ದೇವೆ. ಆತನು ಹೇಗೆ ಬರುವುದು ಆತನ ನಿರ್ಣಯದ ಮೇಲೆ ಆಧಾರಪಟ್ಟಿರುತ್ತದೆ. ಆದುದರಿಂದ ನಾವು ಹೇಳುವುದಕ್ಕೆ ಅರ್ಹರಲ್ಲ. ಆತನು ಹೇಗೆ ಇರುತ್ತಾನೆ? ಎನ್ನುವುದಕ್ಕಿಂತ 'ಆತನು ಹೇಗೆ ಜ್ಞಾನವನ್ನು ತಿಳಿಸುತ್ತಾನೆ' ಎನ್ನುವುದೇ ಮುಖ್ಯ. ಆತನು ಹೇಗೆ ಬಂದರೂ ಮನುಷ್ಯನಂತೆ ಬರಬೇಕಾಗಿದ್ದೆ. ಈದಿನ ಒಬ್ಬ ಮನುಷ್ಯ ಅದೂ ಹೊಸದಾಗಿ ಬಂದಿರುವ ಮನುಷ್ಯ ಹೇಳುವ ಜ್ಞಾನವನ್ನು ಮನುಷ್ಯರು ಕೇಳುವ

ಸ್ಥಿತಿಯಲ್ಲಿ ಇಲ್ಲವೆಂದು ನಮಗೆ ತಿಳಿದಿದೆ. ಆದರೆ ದೇವರು ಭೂಮಿಮೇಲೆ ಅವತರಿಸಿರುವುದು ತನ್ನ ಜ್ಞಾನವನ್ನು ತಿಳಿಸುವುದಕ್ಕೆ, ಆದ್ದರಿಂದ ಈ ಸಲ ಭಗವಂತನಾಗಿ ಜ್ಞಾನ ಹೇಳುವುದು ದೊಡ್ಡ ಸವಾಲ್ ಆಗಿರುತ್ತದೆ. ಆತನು ಹೇಗೆ ಹೇಳುತ್ತಾನೋ ಆತನ ಯೋಜನೆ ಆತನಗಿರುತ್ತದೆ. ಆತನ ವಿಷಯ ನಾವು ಹೇಳಲಾರೆವು ಎನ್ನುವುದೇ ಒಳ್ಳೆಯದು. ಅದಕ್ಕಿಂತ ಹೆಚ್ಚಾಗಿ ಹೇಳುವುದಕ್ಕೆ ಮನುಷ್ಯನಾಗಿ ನನಗೆ ಅನುಮತಿಯಿಲ್ಲ, ಅರ್ಹತೆಯಿಲ್ಲ.

**ಪ್ರಶ್ನೆ :– ನಮ್ಮ ಪ್ರಶ್ನೆಗೆ ನಿಮ್ಮ ಹತ್ತಿರ ಉತ್ತರ ಇಲ್ಲ ಎನ್ನುವಂತಿದೆ. ಆದರೆ ನಮ್ಮ ಪ್ರಶ್ನೆಗಳಿಗೆ ಉತ್ತರ ಎಲ್ಲಿ ಸಿಗುತ್ತದೆ?**

**ಉತ್ತರ :–** ಏಕೆ ಸಿಗುವುದಿಲ್ಲ, ಆ ಸಿಗುವುದೇನೊ ಅದು ನನ್ನ ಹತ್ತಿರವೇ ಸಿಗಬೇಕು. ಏಕೆಂದರೆ! ಬರುವವನಲ್ಲಿನ ಆತ್ಮ ನನ್ನಲ್ಲಿ ಕೂಡಾ ಇದೆ, ಆದ್ದರಿಂದ ಆತ್ಮೇ ಎಲ್ಲರ ರಹಸ್ಯವನ್ನು ಕೂಡಾ ಹೇಳಬಲ್ಲದು. ಆದರೇ ನಡೆಯುವ ಪ್ರಣಾಳಿಕೆಯನ್ನು ಕುರಿತು ಯಾರಿಗೂ ಮೊದಲು ತಿಳಿಯಬಾರದು. ಬರುವಂಥದ್ದು ಭಗವಂತನ ಜನ್ಮ ಆಗಿರುವುದರಿಂದ, ಭಗವಂತನ ಜನ್ಮವನ್ನು ಕುರಿತು ಯಾರಿಗೂ ತಿಳಿಯಬಾರದೆಂಬ ನಿಯಮದ ಪ್ರಕಾರ ಆತ್ಮ ಆ ವಿಷಯವನ್ನು ಹೊರಗೆ ಹೇಳುವುದಿಲ್ಲ. ಧರ್ಮವನ್ನು ಅತಿಕ್ರಮಿಸಿ ನಾನು ಪ್ರವರ್ತಿಸುವುದಿಲ್ಲ. ನನ್ನಲ್ಲಿನ ಆತ್ಮ ಪ್ರವರ್ತಿಸುವುದಿಲ್ಲ. ಆದುದರಿಂದ ಆ ವಿಷಯ ತಿಳಿದರೂ ಹೊರಗೆ ಹೇಳುವುದಿಲ್ಲ. ಜೀವನಕ್ಕೆ ಸಂಬಂಧಿಸಿರುವುದು ಅಲ್ಲದೆ ಜ್ಞಾನಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಕೇಳು ಹೇಳುತ್ತಾನೆ.

**ಪ್ರಶ್ನೆ :– ಆದರೇ ಮತ್ತೊಂದು ವಿಧವಾಗಿ ಮತ್ತೊಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಇದಕ್ಕು ಮೊದಲು ದೇವರು ಎರಡುಸಲ ಭಗವಂತನಾಗಿ ಬಂದಾಗ ಬೋಧನೆ ಮಾತ್ರ ಹೇಳಿಹೋದರೆ ನಂತರ ಸ್ವಲ್ಪ ಕಾಲಕ್ಕೆ ಆ ಬೋಧನೆ ಗ್ರಂಥರೂಪವಾಗಿದೆ. ಹಾಗೆ ಬಂದಿರುವವೇ ಭಗವದ್ಗೀತೆ, ಬೈಬಲ್ ಗ್ರಂಥಗಳು, ಈ ಸಲ ಬಂದರೆ ತಾನು ಹೇಳಬೇಕಾದ ಜ್ಞಾನವನ್ನು ಬೋಧರೂಪದಲ್ಲಿ ಹೇಳುತ್ತಾನಾ, ಗ್ರಂಥರೂಪದಲ್ಲಿ ಹೇಳುತ್ತಾನಾ?**

**ಉತ್ತರ:–** ಇದಕ್ಕುಮೊದಲೇ ಹೇಳಿದ್ದೇನೆ. ಮೊದಲು ಪ್ರವರ್ತಿಸಿದಂತೆ ಪ್ರವರ್ತಿಸುವುದಿಲ್ಲವೆಂದು, ಆದ್ದರಿಂದ ಭಗವಂತನು ಈ ಸಲ ಬೋಧರೂಪದಲ್ಲಿ ಹೇಳುವುದಿಲ್ಲ, ಆತನು ಹೇಳುವುದೆಲ್ಲ ಗ್ರಂಥರೂಪದಲ್ಲಿಯೇ ಹೇಳುತ್ತಾನೆ. ಕೃಷ್ಣನಾಗಿ ಬಂದಾಗ ರಹಸ್ಯವಾಗಿ ಒಬ್ಬನಿಗೆ ಒಂದುಸಲ ಮಾತ್ರವೇ ಜ್ಞಾನವನ್ನು ಹೇಳಿದ್ದಾನೆ. ಎರಡನೆ ಸಲ ಯೇಸುವಾಗಿ ಬಂದಾಗ ಬಹಿರಂಗವಾಗಿ ಎಲ್ಲರಿಗೂ ಮೂರು ವರ್ಷಗಳ ಸಮಯ ಜ್ಞಾನವನ್ನು ಹೇಳಿದ್ದಾನೆ. ಮೂರನೆಸಲ ಬಂದರೆ ಅವುಗಳಿಗೆ ವಿಭಿನ್ನವಾಗಿ ಜ್ಞಾನವನ್ನು ಬೋಧಿಸಬೇಕಾಗಿರುತ್ತದೆ. ಆದ್ದರಿಂದ ಒಬ್ಬನಿಗೆ ಹೇಳುವುದಿಲ್ಲ, ಎಲ್ಲರಿಗೂ ಹೇಳುವುದಿಲ್ಲ. ರಹಸ್ಯವಾಗಿ ಬರಹರೂಪದಲ್ಲಿ ಬರೆದ ಜ್ಞಾನವನ್ನು ಲಕ್ಷ ಜನ ಪ್ರಜೆಗಳಿಗೆ ನೀಡುತ್ತಾನೆ. ಆದುದರಿಂದ ಆತನ ಜ್ಞಾನವನ್ನು ಹೊರಗೆ ಹತ್ತು ಪೈಸೆ ಹೇಳಿದರೂ ಪೂರ್ತಿ ರೂಪಾಯಿಯಷ್ಟು ಗ್ರಂಥಗಳ ಮುಖಾಂತರವೇ ಹೇಳುತ್ತಾನೆ. ಪೂರ್ವದಲ್ಲಿ ಭಗವಂತನಾಗಿ ಹೇಳಿದ ಜ್ಞಾನ ಭಗವಂತನು ಇಲ್ಲದೇ ಹೋದನಂತರ ಗ್ರಂಥರೂಪವಾಗಿದೆ. ಈಗ ಹಾಗಲ್ಲದೆ ಆತನ ಬರಹದಲ್ಲಿಯೇ ಜ್ಞಾನ ಹೊರಗೆ ಬರುತ್ತದೆ.

**ಪ್ರಶ್ನೆ :– ಭಗವಂತನು ಮೊದಲು ಎರಡುಸಲ ಹೇಳಿದ ಜ್ಞಾನ ಎರಡು ದೈವಗ್ರಂಥಗಳಾಗಿ ತಯಾರಾಗಿದೆ. ಈ ಸಲ ಬಂದು ಹೇಳದಂತೆ ಬರಹ ರೂಪದಲ್ಲಿಯೇ ಪ್ರಜೆಗಳ ಹತ್ತಿರಕ್ಕೆ ಜ್ಞಾನವನ್ನು ಗ್ರಂಥರೂಪದಲ್ಲಿ ಕಳಿಸುತ್ತಾನೆ ಎಂದು ಹೇಳುತ್ತಿದ್ದಾರೆ. ಈ ಸಲ ಬರೆಯುವ ಗ್ರಂಥಗಳಿಗೆ ದೈವ ಗ್ರಂಥಗಳೆನ್ನುವ ಹೆಸರಿರುತ್ತದಾಯೆಂದು ಕೇಳುತ್ತಿದ್ದೇವೆ?**

**ಉತ್ತರ :–** ಭೂಮಿಮೇಲೆ ಇರಬೇಕಾಗಿರುವವು ದೈವಗ್ರಂಥಗಳೆಂದು ಹೆಸರಿರುವವು ಮೂರು ಮಾತ್ರವೇ. ಆ ಮೂರು ಈಗಾಗಲೇ ಇವೆ. ಎರಡು ಭಗವಂತನು ಹೇಳಿದ ಜ್ಞಾನದಿಂದ ಇರುವಾಗ, ಮೂರನೆಯದು ಜಿಬ್ರಯೇಲ್ (ಸೂರ್ಯನು) ಹೇಳಿದ ಜ್ಞಾನದಿಂದ ತುಂಬಿದೆ. ಎರಡುಸಲ ಭಗವಂತನು ಹೇಳಿದ ಜ್ಞಾನ ಎರಡು ಗ್ರಂಥಗಳಾಗಿಯೇ ಇದೆ. ಕೃಷ್ಣನು ಹೇಳಿರುವುದು ಭಗವದ್ಗೀತೆಯಾಗಿದ್ದು, ಯೇಸು ಹೇಳಿರುವುದು ಬೈಬಲಾಗಿ ಇದೆ. ಆದರೆ ಈಸಲ ಹೇಳುವುದು ಒಂದು

ಗ್ರಂಥವಾಗಿರುವುದಿಲ್ಲ. ಅನೇಕ ಹೆಸರುಗಳಿಂದ ಅನೇಕ ಗ್ರಂಥಗಳಾಗಿ ಇರಬಹುದು. ಆಗ ಒಂದು ಜನ್ಮಕ್ಕೆ ಒಂದಾದರೆ ಈಗ ಒಂದು ಜನ್ಮಕ್ಕೇ ನೂರು ಗ್ರಂಥಗಳಿರಬಹುದು. ಒಂದು ಗ್ರಂಥವಾದರೆ ಅದನ್ನು ದೈವ ಗ್ರಂಥ ಎಂದು ಕರೆಯಬಹುದು, ಅನೇಕ ಗ್ರಂಥಗಳನ್ನು ದೈವ ಗ್ರಂಥವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆದರೇ ಭಗವಂತನು ಸ್ವಯಂ ರಚನೆಗಳನ್ನು ಪ್ರಜೆಗಳೆ ಹೆಸರಿಟ್ಟು ಕರೆಯುತ್ತಾರೆ. ಆತನ ಗ್ರಂಥಗಳಿಗೆ ದೈವಗ್ರಂಥವೆಂದು ಹೆಸರು ಇಲ್ಲದಿದ್ದರೂ, ಪ್ರತ್ಯೇಕವಾದ ಹೆಸರನ್ನು ಪ್ರಜೆಗಳೇ ಹೇಳುತ್ತಾರೆ.

**ಪ್ರಶ್ನೆ :– ಈಸಲ ಭಗವಂತನ ಆಯುಷ್ಷು ಎಷ್ಟು ಇರುತ್ತದೆ?**

**ಉತ್ತರ :–** ನಾನು ಮೊದಲೇ ಹೇಳಿದ್ದೇನೆ. ಆತನ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಕೇಳಬೇಡವೆಂದು, ಆದರೂ ನೀನು ಕೇಳುತ್ತಿದ್ದೀಯಾ. ಈಗ ಉತ್ತರ ಹೇಳುತ್ತೇನೆ. ಎರಡನೆ ಸಲ ಇಂತಹ ಪ್ರಶ್ನೆಯನ್ನು ಕೇಳಬೇಡ. ದೇವರ ಒಂದು ಜನ್ಮಕ್ಕೆ ಸಂಬಂಧಿಸಿದ ಮೂರು ಭಾಗಗಳಲ್ಲಿ ಮೊದಲು ಭಗವಂತನಾಗಿ ಬಂದಿರುವ ಕೃಷ್ಣನು ಒಟ್ಟು 126 ವರ್ಷಗಳು ಬದುಕಿದ್ದಾನೆ. ಎರಡನೆ ಸಲ ಯೇಸುವಾಗಿ ಬಂದಾಗ ಅದರಲ್ಲಿ ಅರ್ಧ 63 ವರ್ಷಗಳು ಬದುಕಿದ್ದಾನೆ. ಈಗ ಮೂರನೆಸಲ ಬಂದರೆ 70 ವರ್ಷಗಳ ಮೇಲೆ ಬದುಕುತ್ತಾನೆಂದು ಹೇಳಬಹುದು. ಮೊದಲ ಜೀವನ 126 1+2+6 ರನ್ನು ಕೂಡಿದರೆ ಒಂಭತ್ತು ಬರುತ್ತಿದೆ. ಹಾಗೆಯೇ ಎರಡನೆ ಜೀವನವೊಂದರ ಆಯುಷ್ಷು 63 ವರ್ಷಗಳು ಆಗಿದ್ದು ಅದರಲ್ಲಿ 6+3 ಕೂಡಿಸಿದರೆ ಒಂಭತ್ತು ಆಗುತ್ತದೆ. ಹಾಗೆಯೇ ಈಗ ಬರುವ ಮೂರನೆ ಜನ್ಮ ಕೂಡಾ ಬಹುಶಃ 7+2 ಕೂಡಿದರೆ ಒಂಭತ್ತು ಇರುವಂತಿರುತ್ತದೆ ಎಂದು ಅಂದುಕೊಳ್ಳುತ್ತಿದ್ದೇನೆ. ಆದ್ದರಿಂದ 72 ವರ್ಷಗಳಾಗಲಿ ಅಥವಾ 81 ವರ್ಷದ ವರೆಗಾಗಲಿ ಇರಬಹುದು ಎಂದು ಅಂದುಕೊಳ್ಳುತ್ತಿದ್ದೇನೆ. ಈ ಮಾತನ್ನು ಹೇಳಿರುವುದು ಕೂಡಾ ಒಳಗಿರುವ ಆತನೇ (ಆತ್ಮವೇ) ಆದರೂ ನಮ್ಮನ್ನು ಮಭ್ಯಪಡಿಸುವುದಕ್ಕು ಕೂಡಾ ಹೇಳಿರಬಹುದು. ಆತನ ನಿರ್ಣಯ ಆತನಿಗೇ ಗೊತ್ತು.

**ಪ್ರಶ್ನೆ :– ಮೊದಲು ಎರಡು ಸಲ ಬಂದಾಗ 'ಮತ' ಎನ್ನುವ ಪ್ರಸಕ್ತಿಯೇ ಇರಲಿಲ್ಲ. ಯೇಸುವಾಗಿ ಬಂದುಹೋದ ನಂತರ ಮತ ಹುಟ್ಟಿಬಂದಿದೆ. ಮತ ಇಲ್ಲದಿರುವಾಗ ಧರ್ಮಗಳನ್ನು ಹೇಳಿದಂತೆ ಮತ ಇರುವಾಗ ಹೇಳುವುದಕ್ಕೆ ಸಾಧ್ಯವಾಗುತ್ತದೆ?**

**ಉತ್ತರ:–** ಮತವನ್ನು ಮನುಷ್ಯರು ಇಟ್ಟುಕೊಂಡಿದ್ದಾರೆ. ಭಗವಂತನು ಇಡಲಿಲ್ಲ. ಭಗವಂತನು ಹೇಳಿದ ಬೋಧನೆಯನ್ನು ಪ್ರತ್ಯೇಕವಾದ ಮತವಾಗಿ ಹೇಳಿ ಕೊಳ್ಳುತ್ತಿದ್ದಾರೆ. ಆದ್ದರಿಂದ ಯಾವ ಮತ ಬೋಧನೆಯನ್ನಾದರೂ ಸುಲಭವಾಗಿ ಹೇಳುವ ಭಗವಂತನಿಗೆ ಮತ ಅಡ್ಡ ಬರುವುದಿಲ್ಲ.

**ಪ್ರಶ್ನೆ;– ಕೃಷ್ಣನಾಗಿ ಭಗವದ್ಗೀತೆಯನ್ನು ಹೇಳಿದ್ದಾನೆ, ಆದ್ದರಿಂದ ಭಗವದ್ಗೀತಾ ಜ್ಞಾನವನ್ನಾದರೂ, ಅದರಲ್ಲಿನ ಯಾವ ಪ್ರಶ್ನೆಗಾದರೂ ಉತ್ತರವನ್ನು ಹೇಳಬಹುದು. ಹಾಗೆಯೇ ಯೇಸುವಾಗಿ ಹೇಳಿದಾಗ ಅದೇ ಬೈಬಲಾಗಿ ಬದಲಾಗಿದೆ, ಆದ್ದರಿಂದ ಬೈಬಲ್ ಜ್ಞಾನವನ್ನಾಗಲಿ, ಬೈಬಲ್‌ನಲ್ಲಿನ ಯಾವ ಪ್ರಶ್ನೆಗಾದರೂ ಉತ್ತರವನ್ನಾಗಲಿ ಸುಲಭವಾಗಿ ಹೇಳುತ್ತಾನೆ. ಏಕೆಂದರೆ! ಭಗವದ್ಗೀತೆಯನ್ನು, ಬೈಬಲ್‌ನನ್ನು ಆತನೇ ಹೇಳಿದ್ದಾನೆ ಆದ್ದರಿಂದ ಯಾವ ಮತದಲ್ಲಿನ ಪ್ರಶ್ನೆಗಾದರೂ ಉತ್ತರವನ್ನು ಹೇಳುತ್ತಾನೆ. ಆದರೆ ಖುರಾನ್ ಗ್ರಂಥವನ್ನು ತಾನು ಹೇಳಲಿಲ್ಲ. ಅದನ್ನು ಜಿಬ್ರಯೇಲ್ (ಸೂರ್ಯ) ಗ್ರಹ ಹೇಳಿದೆ. ಆದ್ದರಿಂದ ಖುರಾನ್ ಗ್ರಂಥದಲ್ಲಿನ ಜ್ಞಾನವನ್ನಾಗಲಿ, ಅದರಲ್ಲಿನ ಪ್ರಶ್ನೆಗೆ ಉತ್ತರವನ್ನಾಗಲಿ ಭಗವಂತನು ಹೇಳುತ್ತಾನಾ?**

**ಉತ್ತರ :–** ಆಕಾಶವಾಣಿ ಜ್ಞಾನವನ್ನು ಸೂರ್ಯಗ್ರಹ ಕೇಳಿದೆಯೆಂದು, ಅದನ್ನೇ ಈಗ ಹೇಳುತ್ತಿದ್ದೇನೆಂದು ಕೃಷ್ಣನು ಅರ್ಜುನನಿಗೆ ಭಗವದ್ಗೀತೆ ರೂಪದಲ್ಲಿ ಸೂರ್ಯನು ಹೇಳಿದ ಜ್ಞಾನವನ್ನೇ ಹೇಳಿದ್ದಾನೆ. ಅದೇ ಸೂರ್ಯನು (ಜಿಬ್ರಯೇಲ್) ಹೇಳಿರುವುದೇ ಖುರಾನ್ ಗ್ರಂಥವಾಗುವುದರಿಂದ, ಅದರಲ್ಲಿನದು ಭಗವದ್ಗೀತೆ ಜ್ಞಾನವಾಗುವುದರಿಂದ ಅದಕ್ಕೆ ಕೂಡಾ ಸುಲಭವಾಗಿ ಉತ್ತರ ಹೇಳುತ್ತಾನೆ. ಮೂರು ಗ್ರಂಥಗಳು ದೈವಗ್ರಂಥಗಳೇ ಆಗುವುದರಿಂದ ದೈವವಾದ ಭಗವಂತನು ಏಕೆ ಹೇಳಲಿಲ್ಲ? ಯಾವುದಕ್ಕಾದರೂ ಉತ್ತರ ಕೊಡುತ್ತಾನೆ.

**ಪ್ರಶ್ನೆ :– ಈದಿನ ಭೂಮಿಮೇಲೆ ಮೂರು ಮುಖ್ಯವಾದ ಮತಗಳಿವೆ. ಒಂಭತ್ತು ಮುಖ್ಯವಲ್ಲದ ಮತಗಳಿವೆ. ಒಟ್ಟು ಹನ್ನೆರಡು ಮತಗಳಿವೆ. ಈ ಸಲ ದೇವರು ಭಗವಂತನೆನ್ನುವ ಮಾರುವೇಷದಿಂದ ಭೂಮಿಮೇಲಕ್ಕೆ ಬಂದರೆ ಯಾವ ಮತದಲ್ಲಿ ಹುಟ್ಟಬಹುದು.?**

**ಉತ್ತರ :–** ಭಗವಂತನಿಗೆ ಮತ ಇರುವುದಿಲ್ಲ. ಆತನು ಹುಟ್ಟಿದ ಭೌತಿಕ ತಾಯಿ ತಂದೆಯರಿಗೆ ಮತ ಇರುತ್ತದೆ. ಆದುದರಿಂದ ಹಿಂದೂಮತದಲ್ಲಿನ ತಾಯಿ ತಂದೆಯರಿಗೆ ಆತನು ಹುಟ್ಟುತ್ತಾನೆಂದು ಹೇಳಬಹುದು. ಇದಕ್ಕು ಮೊದಲು ಎರಡುಸಲ ಹಿಂದೂಗಳ (ಇಂದೂಗಳ) ಮತಕ್ಕೆ ಸಂಬಂಧಿಸಿದ ತಾಯಿತಂದೆ ಯರಿಗೆ ಹುಟ್ಟಿದ್ದಾನೆ. ಹಾಗೆ ಈಗಲೂ ಸಹ ಹಿಂದೂ ಮನೆಯಲ್ಲಿಯೇ ಹುಟ್ಟುತ್ತಾನೆಂದು ಹೇಳಬಹುದು.

**ಪ್ರಶ್ನೆ :– ತಮಗೆ ಭಗವಂತನು ಹುಟ್ಟಿದ್ದಾನೆಂದು ತಾಯಿತಂದೆಯರಿಗೆ ಸ್ವಲ್ಪವಾದರೂ ತಿಳಿದಿದೆಯಾ? ತಿಳಿದಿಲ್ಲವಾ?**

**ಉತ್ತರ :–** ತಿಳಿದರೆ ದೇವರ ಗುಟ್ಟು ಹೊರಬೀಳುತ್ತದೆ. ಆದ್ದರಿಂದ ತಿಳಿದಿಲ್ಲವೆಂದೇ ಹೇಳಬಹುದು. ಕೃಷ್ಣನ ಜನ್ಮದಲ್ಲಿ ಅಲ್ಲಿ ತಾಯಿತಂದೆಯರಾದ ದೇವಕಿ, ವಸುದೇವರಿಗೆ ತಮ್ಮ ಹೊಟ್ಟೆಯಲ್ಲಿ ಮಹೋನ್ನತ ವ್ಯಕ್ತಿ ಹುಟ್ಟಿದ್ದಾನೆಂದು ತಿಳಿದಿದೆ. ಆದರೆ ದೇವರು ಬಂದು ಭಗವಂತನಾಗಿ ಹುಟ್ಟಿದ್ದಾನೆಂದು ತಿಳಿದಿಲ್ಲ. ಯೇಸುಪ್ರಭುವಾಗಿ ಬಂದಾಗ ಕೂಡಾ ಅಷ್ಟೇ ತಿಳಿದಿರುತ್ತದೆ. ಆದರೆ ಮೂರನೆಸಲ ಬಂದಾಗ ಇರುವ ತಂದೆತಾಯಿಯರಿಗೆ ತಮ್ಮ ಮಗನ ಘನತೆಯನ್ನು ಕುರಿತು ಸ್ವಲ್ಪವೂ ತಿಳಿದಿಲ್ಲ. ಅದು ಅಲ್ಲದೆ ಈಸಲ ಬರುವ ಭಗವಂತನ ತಾಯಿತಂದೆಯರು ಪರಮ ಮೂರ್ಖರಾಗಿ, ಅಜ್ಞಾನಿಗಳಾಗಿ ಇರುತ್ತಾರೆ. ವಾಸ್ತವವಾಗಿ ಹೇಳಬೇ ಕೆಂದರೆ ಅವರು ಯಾವ ಜ್ಞಾನ ಇಲ್ಲದ ಜಂತುಗಳಿಗೆ ಸಮಾನ. ಬಾಹ್ಯಪೂಜೆಗಳು ಮಾಡುವುದಿಲ್ಲ ಎಂದು ಹೇಳಿದ ಭಗವಂತನನ್ನು ತಮ್ಮ ಮಾತು ಕೇಳಲಿಲ್ಲವೆಂದು ಸಾಯಿಸಬೇಕೆಂದು ನೋಡುವ ಮೂರ್ಖರಾಗಿರುತ್ತಾರೆ. ಮನುಷ್ಯರಲ್ಲಿನ ಅಜ್ಞಾನಗಳಲ್ಲಿ ಪೂರ್ತಿ ಕೊನೆಯವರಾಗಿರುವ ಅವರನ್ನು ತಾಯಿತಂದೆಯರಾಗಿ

ಆಯ್ಕೆ ಮಾಡಿಕೊಂಡು ಭಗವಂತನೇ ಅವರ ಹೊಟ್ಟೆಯಲ್ಲಿ ಹುಟ್ಟುತ್ತಾನೆ ಆದರೆ ಅವರ ಅದೃಷ್ಟವಿದ್ದಂತೆ ಭಗವಂತನು ಅವರ ಹೊಟ್ಟೆಯಲ್ಲಿ ಹುಟ್ಟುವುದಿಲ್ಲ. ದೇಶವೆಲ್ಲ ಭಗವಂತನ ಮಹೋನ್ನತೆಯನ್ನು ಹೇಳಿದರೆ, ಆತನ ತಾಯಿತಂದೆಯರು ಮಾತ್ರ ಆತನು ಬಹಳ ಕೆಟ್ಟವನೆಂದು ಪ್ರಚಾರ ಮಾಡುವವರಾಗಿರುತ್ತಾರೆ.

**ಪ್ರಶ್ನೆ :– ಈ ಸಲ ಭಗವಂತನಿಗೆ ಸಂಬಂಧಿಕರಾಗಲಿ, ಅಣ್ಣತಮ್ಮಂದಿರಾಗಲಿ ಇರುತ್ತಾರಾ?**

**ಉತ್ತರ :–** ಎಲ್ಲರೂ ಇರುತ್ತಾರೆ ಆದರೆ ಯಾರೊಂದಿಗೂ ಆತನಿಗೆ ಸಂಬಂಧ ಇರುವುದಿಲ್ಲ. ಆತನನ್ನು ನೋಡಿ ಎಲ್ಲರೂ ಆತನೊಂದಿಗೆ ನಮಗೆ ಸಂಬಂಧ ಇಲ್ಲವೆಂದು ಹೇಳುತ್ತಿರುತ್ತಾರೆ ಹೊರತು ಆತನು ನಮ್ಮವನೆಂದು ಯಾರೂ ಹೇಳುವುದಿಲ್ಲ. ಭಗವಂತನ ಜ್ಞಾನ ಅವರಿಗೆ ಸರಿಹೋಗುವುದಿಲ್ಲ. ಆದ್ದರಿಂದ ಯಾರಾಗಲಿ ಆತನೊಂದಿಗೆ ಸಂಬಂಧ ಹೊಂದಿರುವುದಿಲ್ಲ. ಈ ಸಲ ಭಗವಂತನು ಯಾರ ಸಂಬಂಧ ಇಲ್ಲದವನಾಗಿರುತ್ತಾನೆ. ಕೊನೆಗೆ ಹೆಂಡತಿ ಕೂಡಾ ಆತನ ಹತ್ತಿರ ಇರುವುದಿಲ್ಲ. ತಾಯಿ ಸಂಬಂಧವಾಗಲಿ, ತಂದೆ ಸಂಬಂಧವಾಗಲಿ, ಹೆಂಡತಿ ಸಂಬಂಧವಾಗಲಿ, ಅಣ್ಣತಮ್ಮಂದಿರ ಸಂಬಂಧವಾಗಲಿ, ಯಾರ ಸಂಬಂಧ ಇಲ್ಲದವನಾಗಿರುತ್ತಾನೆ.

**ಪ್ರಶ್ನೆ :– ದೇವರು ಭಗವಂತನಾಗಿ ಹುಟ್ಟಿದರೆ ನಂತರ ಜನ್ಮದಲ್ಲಿ ಬರುತ್ತೇನೆಂದು ಹೇಳಿ ಹೋದ ಸಂದರ್ಭ ಭಗವದ್ಗೀತೆಯಲ್ಲಿ ಇದೆ. ಹಾಗೆಯೇ ಬೈಬಲ್‌ನಲ್ಲಿ ಇದೆ. ಅಧರ್ಮಗಳು ವೃದ್ಧಿ ಹೊಂದಿದಾಗ ಪುನಃ ಬರುತ್ತೇನೆಂದು ಕೃಷ್ಣನು ಹೇಳಿದ್ದಾನೆ. ಹಾಗೆಯೇ ಯೇಸು ಆದರಣಕರ್ತನಾಗಿ ಬರುತ್ತೇನೆಂದು ಹೇಳಿದ್ದಾನೆ. ಮೂರನೆ ಸಲ ಬರುವ ಭಗವಂತನು ತನ್ನ ನಂತರ ಜನ್ಮವನ್ನು ಕುರಿತು ಹೇಳುತ್ತಾನಾ?**

**ಉತ್ತರ :–** ಆ ಎರಡು ಜನ್ಮಗಳಲ್ಲಿ ಮೊದಲೆ ಹೇಳಿದರೂ ಆ ಜನ್ಮಗಳನ್ನು ಯಾರೂ ಗುರುತಿಸಲಿಲ್ಲ. ಆದರಣಕರ್ತ ಇಲ್ಲಿಯವರೆಗೂ ಯಾರೋ ತಿಳಿದಿಲ್ಲ. ನಂತರ ಯಾರೂ ಗುರುತಿಸುವುದಕ್ಕು ಕೂಡಾ ಸಾಧ್ಯವಿಲ್ಲ. ಮೊದಲು ಬಂದಿರುವ

ಭಗವಂತನು ಹೇಳಿರುವಂತೆ ಈಗ ನಮಗೆ ತಿಳಿಯುವುದರಿಂದ ಈ ಸಲ ಹಾಗೆ ಹೇಳಿದರೆ ಇಂದಿನ ಭಗವಂತನನ್ನು ಸುಲಭವಾಗಿ ಗುರುತಿಸುವುದಕ್ಕೆ ಸಾಧ್ಯವಿದೆ. ಆದ್ದರಿಂದ ಈ ಸಲ ಭಗವಂತನು ತನ್ನ ಎರಡನೆ ಜನ್ಮವನ್ನು ಕುರಿತು ಹೇಳುವುದಿಲ್ಲ.

**ಪ್ರಶ್ನೆ :– ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಯೇಸುವಾಗಿ ಬಂದಾಗ ದೇವರು ಆದರಣಕರ್ತನಾಗಿ ಬರುತ್ತಾನೆಂದು ಹೇಳಿದ್ದಾನೆ. ಇದನ್ನನುಸರಿಸಿ ಆದರಣಕರ್ತ ಎಂದರೆ ಬರುವಂತಹ ಭಗವಂತನೆಂದು ನಮಗೆ ಅರ್ಥವಾಗಿದೆ. ಹೇಳಿ ಎರಡುಸಾವಿರ ವರ್ಷಗಳಾಗಿದೆ. ಆದರಣಕರ್ತನಾಗಿ ಬರುವ ಭಗವಂತನು ಯಾವಾಗ ಬರುತ್ತಾನೆಂದು ಲೆಕ್ಕಿಸಬೇಕು. ಆದರಣಕರ್ತ ಬಂದುಹೋಗಿದ್ದಾನಾ? ಬರುತ್ತಾನಾ?**

**ಉತ್ತರ :–** ಕೆಲವು ವಿಷಯಗಳು ನಮಗೆ ತಿಳಿದರೂ ನಾವು ಹೇಳುವುದಿಲ್ಲ. ಅವು ದೈವ ರಹಸ್ಯಗಳಾಗಿಯೇ ಇರಬೇಕೆಂದು ಅಂದುಕೊಳ್ಳುತ್ತೇವೆ. ಆದರಣಕರ್ತ ವಿಷಯ ತಿಳಿದಿಲ್ಲವೆಂದು ಇದಕ್ಕುಮೊದಲೆ ಹೇಳಿದ್ದೇವೆ. ಆದರೂ ನೀನು ಕೇಳಿದ್ದೀಯಾ. ಅದನ್ನು ಕುರಿತು ನಾನು ಹೇಳುವುದು ಏನೆಂದರೆ! ಭಗವಂತನಾದ ಆದರಣಕರ್ತ ಬಂದುಹೋಗಿರಬಹುದು, ಅಥವಾ ಬಂದಿರಬಹುದು, ಅಥವಾ ಶೀಘ್ರದಲ್ಲೇ ಬರಬಹುದು ಎಂದು ಮಾತ್ರ ಹೇಳಬಲ್ಲೆವು. ಅಷ್ಟೇಹೊರತು ಏನು ಹೇಳಲಾರೆವು.

**ಪ್ರಶ್ನೆ :– ಭಗವಂತನಿಗೆ ಆರು ಲಕ್ಷಣಗಳಿರುತ್ತವೆಂದು ಕೆಲವರನ್ನುತ್ತಿದ್ದಾರೆ. ಆ ಆರು ಲಕ್ಷಣಗಳು ಎಲ್ಲಿವೆಯೋ ಅವನನ್ನು ಭಗವಂತನೆಂದು ಗುರುತಿಸಬಹುದಲ್ಲವೆ! ಇದಕ್ಕೆ ನೀವೇನೆನ್ನುತ್ತೀರಾ?**

ಉತ್ತರ :– ಈ ಮಾತನ್ನು ಕೇಳಿದರೆ ನಗುಬರುತ್ತದೆ ಆದರೆ ಮಾತುಗಳು ಬರುವುದಿಲ್ಲ. ಕೆಲವರು ಭಗವಂತನಿಗೆ ಆರು ಲಕ್ಷಣಗಳಿರುತ್ತವೆಂದು ಹೇಳಿದ್ದಾರೆ. ಅವು ಕ್ರಮವಾಗಿ 1) ಐಶ್ವರ್ಯ 2) ವೀರ್ಯ 3) ಕೀರ್ತಿ (ಯಶಮು) 4) ಶ್ರೀ

5) ಜ್ಞಾನ 6) ವೈರಾಗ್ಯ ಎಂದು ಹೇಳಿದ್ದಾರೆ. ಇವು ಭಗವಂತನ ಲಕ್ಷಣಗಳಾದರೆ ಭಗವಂತನನ್ನು ಸುಲಭವಾಗಿ ಗುರುತಿಸಬಹುದು. ದೇವರು ದೇವಲಾಡಲ್ಪಡುವವನಾದರೆ ಭಗವಂತನು ಪ್ರಕ್ಕದಲ್ಲಿಯೇ ಇದ್ದರೂ ಆತನನ್ನು ಕಂಡುಕೊಳ್ಳಲಾರೆವು. ಒಂದುವೇಳೆ ನಾನೇ ಭಗವಂತನೆಂದು ಹೇಳಿದರೂ ಆತನನ್ನು ಯಾರೂ ಗುರುತಿಸಲಾರರು. ದೇವರನ್ನಾಗಲಿ, ಭಗವಂತನನ್ನಾಗಲಿ ಯಾರೂ ಗುರುತಿಸಲಾರರು.. ದೇವರ ಬರುವಿಕೆಗೆ ಸಮಯವನ್ನೇ ಗುರುತಿಸಲಾರದವರು ಭಗವಂತನನ್ನು ಗುರುತಿಸುತ್ತೇವಾ???

## ಮುಕ್ತಾಯ



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯ ಆಗುವುದಿಲ್ಲ**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ, ಅದು ಅಸತ್ಯ ಆಗುವುದಿಲ್ಲ.**

1. **ತಿಳಿಯದ ಆಕಾಶ ಒಂದಾಗಿದ್ದು**
   **ತಿಳಿಯುವ ಸೂರ್ಯ, ಚಂದ್ರ,**
   **ನಕ್ಷತ್ರಗಳು ಮೂರು (ತ್ರೈತ) ಇವೆ.**
2. **ತಿಳಿಯದ ಕಾಲ ಒಂದಾಗಿದ್ದು**
   **ತಿಳಿಯುವ ದಿನ, ಮಾಸ, ಸಂವತ್ಸರ**
   **ಮೂರು (ತ್ರೈತ) ಇವೆ.**
3. **ತಿಳಿಯದ ಪರಮಾತ್ಮ ಒಂದಾಗಿದ್ದು**
   **ತಿಳಿಯುವ ಅಂಡಜ, ಪಿಂಡಜ,**
   **ಉದ್ಭಿಜ ಮೂರು (ತ್ರೈತ) ಇವೆ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

Cell:09705864675, 09440556968, 09611133635

# ದೇವರ ಆಗಮನಕ್ಕೆ

## ಇದು ಸಮಯವಲ್ಲವೇ?




*Author :*

*The Only GURU of Three Religions*

*The Spiritual Emperor, Thraitha Theorem Originator*

**Sri Acharya Prabodhananda Yogeeshwarulu**

**www.thraithashakam.org**